# ಬಸವಣ್ಣನ ಕುರಿತ ಆಧುನಿಕ ನಾಟಕಗಳ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್ ಪದವಿಗೆ ಸಲ್ಲಿಸುತ್ತಿರುವ ಸಂಪ್ರಬಂಧ)

ಸಂಶೋಧಕರು
ಮೈಲಾರಗೌಡ ಹೆಚ್



ಮಾರ್ಗದರ್ಶಕರು
ಡಾ. ವೆಂಕಟೇಶ ಇಂದ್ವಾಡಿ
ಸಹ ಪ್ರಾಧ್ಯಾಪಕರು
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ



ಭಾಷಾ ನಿಕಾಯ
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ–೫೮೩೨೭೬
೨೦೧೬

# ಬಸವಣ್ಣನ ಕುರಿತ ಆಧುನಿಕ ನಾಟಕಗಳ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್ ಪದವಿಗೆ ಸಲ್ಲಿಸುತ್ತಿರುವ ಸಂಪ್ರಬಂಧ)



ಸಂಶೋಧಕರು
**ಮೈಲಾರಗೌಡ ಹೆಚ್**

ಮಾರ್ಗದರ್ಶಕರು
**ಡಾ. ವೆಂಕಟೇಶ ಇಂದ್ವಾಡಿ**
ಸಹ ಪ್ರಾಧ್ಯಾಪಕರು
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ



**ಭಾಷಾ ನಿಕಾಯ**
**ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ**
**ಕನ್ನಡ ವಿಶ್ವವಿದ್ಯಾಲಯ, ಹಂಪಿ**
**ವಿದ್ಯಾರಣ್ಯ–೫೮೩೨೭೬**
**೨೦೧೬**

# ದೃಢೀಕರಣ ಪತ್ರ

**'ಬಸವಣ್ಣನ ಕುರಿತ ಆಧುನಿಕ ನಾಟಕಗಳ ಅಧ್ಯಯನ'** ಎಂಬ ವಿಷಯದ ಕುರಿತು **ಮೈಲಾರಗೌಡ.ಹೆಚ್** ಇವರು ನನ್ನ ಮಾರ್ಗದರ್ಶನದಲ್ಲಿ ಸಂಶೋಧನೆ ನಡೆಸಿ ಈ ಪ್ರಬಂಧವನ್ನು ಸಿದ್ಧಪಡಿಸಿರುತ್ತಾರೆ. ಈ ಮೊದಲು ಯಾವುದೇ ಪದವಿಗಾಗಿ ಯಾವುದೇ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್ ಪ್ರಬಂಧವನ್ನು ಸಲ್ಲಿಸಿರುವುದಿಲ್ಲ ಎಂದು ಈ ಮೂಲಕ ದೃಢೀಕರಿಸಲಾಗಿದೆ.

**ಮಾರ್ಗದರ್ಶಕರು**

**(ಡಾ. ವೆಂಕಟೇಶ ಇಂದ್ವಾಡಿ)**
ಸಹ ಪ್ರಾಧ್ಯಾಪಕರು
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩೨೭೬

**ದಿನಾಂಕ** : ೨೯/07/2016
**ಸ್ಥಳ** : ವಿದ್ಯಾರಣ್ಯ

# ಘೋಷಣಾ ಪತ್ರ

ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ **'ಬಸವಣ್ಣನ ಕುರಿತ ಆಧುನಿಕ ನಾಟಕಗಳ ಅಧ್ಯಯನ'** ಎಂಬ ಪ್ರಬಂಧವು **ಡಾ. ವೆಂಕಟೇಶ ಇಂದ್ವಾಡಿ** ಸಹ ಪ್ರಾಧ್ಯಾಪಕರು, ಅವರ ಮಾರ್ಗದರ್ಶನದಲ್ಲಿ ಸಂಶೋಧನಾತ್ಮಕ ಅಧ್ಯಯನವನ್ನು ಆಧರಿಸಿ ರಚನೆಗೊಂಡಿದ್ದಾಗಿದೆ. ಈ ಎಂ.ಫಿಲ್ ಪ್ರಬಂಧವನ್ನು ನಾನು ಈ ಮೊದಲು ಯಾವುದೇ ಪದವಿಗಾಗಿ ಯಾವುದೇ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿರುವುದಿಲ್ಲವೆಂದು ಹಾಗೂ ಬಿಡಿ ಇಲ್ಲವೇ ಇಡಿಯಾಗಿ ಪ್ರಕಟಗೊಂಡಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.


ಸಂಶೋಧಕರು

**(ಮೈಲಾರಗೌಡ.ಹೆಚ್)**
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩೨೭೬


**ದಿನಾಂಕ :** 29/07/2016
**ಸ್ಥಳ** : ವಿದ್ಯಾರಣ್ಯ

<u>ಪರಿವಿಡಿ</u>

## ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವಿಧಾನ

### ೧.೧ ಪ್ರಸ್ತಾವನೆ :

ಕನ್ನಡ ಸಾಹಿತ್ಯಕ್ಕೆ ಸುಮಾರು ೨೫೦೦ ವರ್ಷಗಳ ಇತಿಹಾಸವಿದೆ. ಇಷ್ಟು ಸುದೀರ್ಘವಾದ ಕನ್ನಡ ಸಾಹಿತ್ಯದಲ್ಲಿ ಸಾಹಿತ್ಯ ಚರಿತ್ರಾಕಾರರು ಹಲವಾರು ಕಾಲಘಟ್ಟಗಳನ್ನು ತಿಳಿಸಿದ್ದಾರೆ. ಪಂಪಪೂರ್ವಯುಗ, ಪಂಪಯುಗ, ಬಸವಯುಗ, ಕುಮಾರವ್ಯಾಸಯುಗ, ಆಧುನಿಕಯುಗ ಈ ಎಲ್ಲಾ ಯುಗಗಳಲ್ಲಿಯೂ ಅಪಾರ ಸಾಹಿತ್ಯ ರಾಶಿ ಬೆಳೆದು ಬಂದಿದೆ. ಸಾಮಾನ್ಯವಾಗಿ ಈ ಎಲ್ಲಾ ಕಾಲಘಟ್ಟಗಳಲ್ಲಿಯೂ ಚಂಪೂ, ರಗಳೆ, ಷಟ್ಪದಿ, ಸಾಂಗತ್ಯ ಕಾವ್ಯಗಳೆ ಕಂಡು ಬರುತ್ತವೆ. ಆದರೆ ನಾಟಕ ಪ್ರಕಾರ ಕಂಡು ಬರುವುದಿಲ್ಲ. ಹಳಗನ್ನಡ, ನಡುಗನ್ನಡ ಕಾವ್ಯಗಳಲ್ಲಿ ನಾಟಕದ ಲಕ್ಷಣಗಳು ಕಂಡುಬರುತ್ತವೆ. ಆದರೆ ಸ್ವತಂತ್ರ ನಾಟಕ ಕೃತಿಗಳು ರಚನೆಯಾಗಿಲ್ಲ. ಕನ್ನಡ ಸಾಹಿತ್ಯದಲ್ಲಿ ನಾಟಕ ಪ್ರಕಾರ ಕಂಡುಬರುವುದು ಆಧುನಿಕ ಯುಗದಲ್ಲಿ ಮಾತ್ರ ಎಂಬುದು ಪ್ರಮುಖವಾದ ವಿಷಯ.

ನಾಟಕ ಪ್ರಕಾರ ಎಂಬುದು ಪ್ರಾಚೀನ ಕನ್ನಡ ಸಾಹಿತ್ಯ ಪ್ರಕಾರವಾಗಿ ಕಾಣಿಸಿಕೊಂಡಿಲ್ಲ. ಸಂಸ್ಕೃತ ನಾಟಕ 'ರತ್ನಾವಳಿ'ಯನ್ನು ಅನುಸರಿಸಿ, ಸಿಂಗರಾರ್ಯ 'ಮಿತ್ರವಿಂದಾಗೋವಿಂದ' ನಾಟಕ ರಚಿಸಿದ. ಇದೇ ಕನ್ನಡ ಮೊದಲ ನಾಟಕವೆಂದು ಹೆಸರಾಯಿತು. ಆಧುನಿಕ ಕನ್ನಡ ಸಾಹಿತ್ಯದಲ್ಲಿ ಕಂಡು ಬರುವ ನಾಟಕ ಪ್ರಕಾರ ಪಾಶ್ಚಾತ್ಯ ರಂಗಭೂಮಿಯ ಪ್ರಭಾವದಿಂದ ಹುಟ್ಟಿಕೊಂಡದ್ದು. ಮೂಲತ ನಾಟಕಗಳು ಗ್ರೀಕ್‌ನಲ್ಲಿ ಜನ್ಮ ತಾಳಿದವು. ಅಲ್ಲಿನ ಡಯೋಟಿಯಸ್ ದೇವತೆಯ ಹಬ್ಬದ ಉತ್ಸವಗಳಲ್ಲಿ ದೇವತೆಯ ಮುಂದೆ ಮಾಡುತ್ತಿದ್ದ ಅಭಿನಯ, ಹಾಡು, ಸಂಗೀತ ಇವುಗಳೆಲ್ಲವೂ ನಾಟಕದ ಹುಟ್ಟಿಗೆ ಕಾರಣವಾದವು. ಆರಂಭದಲ್ಲಿ ನಾಟಕ ಎಂಬುದು ದೇವತೆಗಳನ್ನು ತೃಪ್ತಿಪಡಿಸುವುದಕ್ಕಾಗಿ ಬೆಳೆದು ಬಂದಿತು. ದುಷ್ಟ ದೇವತೆಗಳನ್ನು ಅವುಗಳಿಗೆ ಹಾಡು ಸಂಗೀತದ ಮೂಲಕ ತೃಪ್ತಿ ಪಡಿಸಲಾಗುತ್ತಿತ್ತು. ಈ ರೀತಿಯಿಂದ ಆರಂಭವಾದ ನಾಟಕ ಇಂದು ತುಂಬಾ ಎತ್ತರಕ್ಕೆ ಬೆಳೆದು ನಿಂತಿದೆ. ನಾಟಕ ರಂಗಭೂಮಿಯ ಮೇಲೆ ನಟಿಸುವುದಕ್ಕಾಗಿ ರೂಪುಗೊಂಡ ಸಾಹಿತ್ಯ ಪ್ರಕಾರವಾದ್ದರಿಂದ ಉಳಿದ ಸಾಹಿತ್ಯ ಪ್ರಕಾರಗಳಿಗಿಂತ ಇದು ಅತ್ಯುನ್ನತ ಸ್ಥಾನವನ್ನು ಪಡೆದಿದೆ. ಕವಿ ಕಾಳಿದಾಸನು ನಾಟಕದ ಪ್ರಾಮುಖ್ಯತೆಯನ್ನು ತಿಳಿಸುತ್ತಾ "ಕಾವ್ಯೇಷು ನಾಟಕ ರಮ್ಯ" ಎಂದಿದ್ದಾನೆ.

ನಾಟಕ ಸಾಹಿತ್ಯದ ರಚನೆಯ ಆರಂಭ ಕಾಲದಲ್ಲಿ ಸ್ವತಂತ್ರ ನಾಟಕಗಳು ಕಂಡುಬರುವುದಿಲ್ಲ. ಬದಲಾಗಿ ಬೇರೆ ಭಾಷೆಯ ನಾಟಕಗಳನ್ನೇ ಭಾಷಾಂತರ, ರೂಪಾಂತರ ಮೂಲಕ ರಚಿಸುತ್ತಿದ್ದರು. ಅನಂತರದ ಅವಧಿಯಲ್ಲಿ ಸ್ವತಂತ್ರ ನಾಟಕಗಳ ರಚನೆ ಆರಂಭವಾಯಿತು.

ಆಧುನಿಕ ಕನ್ನಡ ನಾಟಕ ಪ್ರಕಾರವು ಉಗಮವಾದುದು ಸುಮಾರು ಕ್ರಿ.ಶ. ೧೮೮೦ರ ಕಾಲದಲ್ಲಿ. ನಾಟಕ ಸಾಹಿತ್ಯದ ಕುರಿತು ನಡೆದ ಇದುವರೆಗಿನ ಅಧ್ಯಯನಗಳು ಶಾಸನ, ಪ್ರಾಚೀನ ಕಾವ್ಯ ಮತ್ತು ಇತರ ಮೂಲಗಳಿಂದ ಇದರ ಮೂಲವನ್ನು ಗುರುತಿಸುವ ಪ್ರಯುತ್ನ ಮಾಡಿದೆ.

ಬಹುಮೂಲಗಳಾದ ಸಂಸ್ಕೃತ ನಾಟಕದ ಪ್ರಭಾವ, ಇಂಗ್ಲಿಷ್ ನಾಟಕಗಳ ಅಳವಡಿಕೆ, ರಂಗಭೂಮಿ ವಿಕಾಸ ಮತ್ತು ಈ ಕುರಿತಾದ ಜನ ಸಮುದಾಯದ ಆಸಕ್ತಿ ಹಾಗೂ ಜನಪದ ರಂಗಭೂಮಿ ಸಂಬಂಧ,

ಇವೆಲ್ಲವನ್ನು ಜೀರ್ಣಿಸಿಕೊಳ್ಳಲು ಪೂರಕವಾದ ಆಧುನಿಕ ಶಿಕ್ಷಣ ವಸಾಹತು ಸಂದರ್ಭದ ಗಮನಾರ್ಹ ಪಲ್ಲಟಗಳೆಲ್ಲ ಒಂದಕ್ಕೊಂದು ಸಂಯೋಜನೆಗೊಂಡು ಕನ್ನಡದಲ್ಲಿ ಆಧುನಿಕ ನಾಟಕ ಪ್ರಕಾರವೊಂದು ರೂಪಗೊಳ್ಳಲು ಅಥವಾ ಭಾಷಾಂತರಗೊಳ್ಳಲು ಸಾಧ್ಯವಾಯಿತು. ಆರಂಭದಲ್ಲಿ ರಂಗಭೂಮಿ ಅಗತ್ಯಕ್ಕಾಗಿ ರಚನೆಗೊಂಡರೂ ನಂತರ ತನ್ನ ಅಸ್ಮಿತೆಯನ್ನು ಈ ಪ್ರಕಾರ ಕಾಯ್ದುಕೊಂಡಿದೆ. ಇದರಿಂದ ಒಟ್ಟಾರೆಯಾಗಿ ಭಾಷಾಂತರ ಮೂಲಕ ಆಧುನಿಕ ನಾಟಕ ಪ್ರಕಾರವು ರೂಪಗೊಂಡಿದೆ ಎನ್ನಬಹುದು. ನಂತರದಲ್ಲಿ ಸ್ವತಂತ್ರ ನಾಟಕಗಳು ರಚನೆಯಾಗುವ ಸಂದರ್ಭದಲ್ಲಿ ಹಲವಾರು ಐತಿಹಾಸಿಕ ಅಥವಾ ಚಾರಿತ್ರಿಕ ವ್ಯಕ್ತಿಯಾದ ಬಸವಣ್ಣನೂ ಕೂಡ ನಾಟಕಗಳ ವಸ್ತುವಾಗಿದ್ದಾನೆ. ಇಂತಹ ಬಸವಣ್ಣನನ್ನು ಕುರಿತ ಅನೇಕ ನಾಟಕಕಾರರು ನಾಟಕಗಳನ್ನು ರಚಿಸಿದ್ದಾರೆ.

ವಸ್ತುವಿನ ಹೊಸತನಕ್ಕಿಂತಲೂ ಶೈಲಿಯ ಸುಧಾರಣೆಯೇ ಮುಖ್ಯವೆನಿಸಿದ್ದು ಮತ್ತು ವಿವಿಧ ಆಯಾಮ ಸಂವೇದನೆಗಳ ನೆಲೆಯಿಂದ ಸಿದ್ಧವಸ್ತುವನ್ನು ಗಮನಿಸಿದ್ದು ಇಲ್ಲಿ ವಿಶೇಷವಾಗಿದೆ. 'ಏನು' ಹೇಳಬೇಕು ಎಂಬುದರ ಪರಿಶ್ರಮ ಈ ಅವಧಿಯ ನಾಟಕ ವಿಭಾಗದಲ್ಲಿ ಆಗಿರುವುದಕ್ಕಿಂತಲೂ 'ಹೇಗೆ' ಹೇಳಬೇಕೆಂಬುದರ ಚಿಂತನೆಗೆ ವಿವಿಧ ಶಾಖೆಗಳು ಲಭಿಸಿವೆ. ಒಂದೆರಡು ದಶಕಗಳ ಹಿಂದಿನ ಕಾಲದಲ್ಲಿ ನಾಟಕಗಳಂತೆ ಇತಿಹಾಸ, ಪುರಾಣ, ಜಾನಪದ 'ವಸ್ತು'ಗಳು ಈ ಅವಧಿಯ ಪ್ರಮುಖ ಮತ್ತು ವಿಶೇಷವೆನ್ನಬಹುದಾದ ನಾಟಕಗಳಲ್ಲಿ ಕಂಡುಬಂದರೂ ಅವುಗಳಂತೆ 'ಯಥಾವತ್ತಾದ' ನಿರೂಪಣೆಯನ್ನು ಇವುಗಳು ಒಳಗೊಳ್ಳದೇ ಪ್ರತಿ ಸಂಸ್ಕೃತಿ ಮೂಲದ ಚಿಂತನೆಗಳ ರೂಪದಲ್ಲಿ ಬಂದಿವೆ. ಇತಿಹಾಸ ಮೊದಲಾದವುಗಳಲ್ಲಿ 'ವಸ್ತು'ವನ್ನು ಹುಡುಕಿ ಆಧುನಿಕ ಮಾನದಂಡಕ್ಕೆ ಅಳವಡಿಸುವ ಪ್ರಯತ್ನ ಈ ಶತಮಾನದಲ್ಲಿ ನಡೆದಿದೆ.

ಕನ್ನಡದ ಚಿಂತನೆ ೧೨ನೇ ಶತಮಾನದ ಶರಣ ಚಳುವಳಿಯನ್ನು ವಿವಿಧ ಶೈಕ್ಷಣಿಕ ಶಿಸ್ತು ಶಾಖೆಗಳಲ್ಲಿ ವಿಶ್ಲೇಷಿಸಿದೆ ಎಂಬುದಕ್ಕೆ ಪ್ರಮುಖ ಸಾಕ್ಷಿಯಾಗಿದೆ. ಪಿ. ಲಂಕೇಶರ 'ಸಂಕ್ರಾಂತಿ', ಗಿರೀಶ ಕಾರ್ನಾಡರ 'ತಲೆದಂಡ', ಎಚ್. ಎಸ್. ಶಿವಪ್ರಕಾಶರ 'ಮಹಾಚೈತ್ರ', ಎಂ.ಎಂ. ಕಲಬುರ್ಗಿಯವರ 'ಕೆಟ್ಟಿತು ಕಲ್ಯಾಣ', ಚಂದ್ರಶೇಖರ ಕಂಬಾರರ 'ಶಿವರಾತ್ರಿ' ಇವುಗಳು ಒಂದೇ ಭಿತ್ತಿಯ ಮೇಲೆ ಚಿತ್ರಿಸಿದ ಸಮಕಾಲೀನ ವ್ಯಾಖ್ಯಾನಗಳು. ವ್ಯಕ್ತಿ ಕೇಂದ್ರಿತವಾಗಿ, ಮೌಲ್ಯ ಕೇಂದ್ರಿತವಾಗಿ, ಸಂವೇದನಾ ಕೇಂದ್ರಿತವಾಗಿ, ಸಾಮಾಜಿಕ ವಾಸ್ತವ ಕೇಂದ್ರಿತವಾಗಿ ಶರಣ ಚಳುವಳಿಯನ್ನು ನಾಟಕದ ಮೂಲಕ ಗಮನಿಸಲೆತ್ನಿಸುವುದು ಆಧುನಿಕ ಶೈಕ್ಷಣಿಕತೆಯ ಸ್ಪಂದನವೆನಿಸುತ್ತದೆ.

ಸರಿಸುಮಾರು ಒಂದೇ ವಸ್ತುವನ್ನೊಳಗೊಂಡ ನಾಟಕಗಳಿದ್ದರೂ ವಿವಿಧ ಶೈಕ್ಷಣಿಕ ನೆಲೆಯ ನಾಟಕಕಾರರಿಂದ ರಚನೆಯಾಗಿರುವುದರಿಂದ 'ಕಲ್ಯಾಣ ಕ್ರಾಂತಿ'ಯ ಪುನರ್ ವಿಶ್ಲೇಷಣೆಯ ಪುನರಾವೃತ್ತಿಯೇ ಆಗಿದೆ ಎನಿಸುತ್ತದೆ. ಒಬ್ಬ ನಾಟಕಕಾರನಿಗೆ, ಕವಿಗೆ, ಸಂಶೋಧಕನಿಗೆ, ವಿಮರ್ಶಕನಿಗೆ ಕಾಣುವ ಒಂದು ಸಾಮಾಜಿಕ ವಿದ್ಯಮಾನದ ಅಭಿಪ್ರಾಯಗಳಾಗಿ ಮೂಡಿಬಂದಿವೆ. ಸಂಕೀರ್ಣವಾಗಿ ಕನ್ನಡದ ಓದುಗನನ್ನು ವಿಮರ್ಶಕರನ್ನು ಎದುರು ಮಾಡಿಕೊಂಡಿವೆ.

### ೧.೨ ಅಧ್ಯಯನದ ಉದ್ದೇಶ :

೧೨ನೇ ಶತಮಾನದ ಬಸವಣ್ಣ ಮತ್ತು ಶರಣ ಚಳುವಳಿ ಕಳೆದ ೮೦೦ ವರ್ಷಗಳ ಚರಿತ್ರೆಯಲ್ಲಿ ಎಲ್ಲ ಶತಮಾನಗಳಲ್ಲೂ ಕನ್ನಡ ವಾಙ್ಮಯವನ್ನು ಬೆಳೆಸುತ್ತಾ ಬಂದಿದೆ. ಪ್ರಾಚೀನ – ಆಧುನಿಕ, ಮೌಖಿಕ – ಬರಹ ಎನ್ನುವ ಗಡಿರೇಖೆಗಳನ್ನು ದಾಟಿ ಬಸವಣ್ಣನನ್ನು ಕುರಿತ ಸಾಹಿತ್ಯ ರಚನೆಯಾಗುತ್ತಲೇ ಇದೆ.

- 'ಬಸವಣ್ಣನ ಕುರಿತ ಆಧುನಿಕ ನಾಟಕಗಳ ಅಧ್ಯಯನ' ಎಂಬ ವಿಷಯವನ್ನು ಕುರಿತು ಸಂಶೋಧನೆಯನ್ನು ಕೈಗೊಳ್ಳಲು ಮೂಲ ಉದ್ದೇಶವೆಂದರೆ ಬಸವಣ್ಣನ ಜೀವನ ಚರಿತ್ರೆಯನ್ನು ಅಥವಾ ಸಾಧನೆಯನ್ನು ಆಧುನಿಕ ಸೃಜನಶೀಲ ಬರಹಗಾರರು ನಾಟಕಗಳ ಮೂಲಕ ಯಾವ ರೀತಿಯಾಗಿ ಅನಾವರಣ ಮಾಡಿದ್ದಾರೆ ಎಂಬುದನ್ನು ತಿಳಿಸುವ ಉದ್ದೇಶ ಅಧ್ಯಯನಕ್ಕಿದೆ.
- ಕನ್ನಡ ಸಾಹಿತ್ಯ ಪ್ರಕಾರಗಳಲ್ಲಿ ಒಂದಾದ ನಾಟಕಗಳು ಅದರಲ್ಲಿ ವಿಶೇಷವಾಗಿ ಬಸವಣ್ಣನ ಕುರಿತಾದ ನಾಟಕಗಳನ್ನು ವಿಶಿಷ್ಟ ನೆಲೆಯಲ್ಲಿ ನೋಡುವುದು ಮತ್ತು ತಾತ್ವಿಕರಿಸುವುದು.
- ಆಧುನಿಕ ನಾಟಕಗಳಲ್ಲಿ ಬಸವಣ್ಣ ಅಭಿವ್ಯಕ್ತಗೊಂಡ ಬಗೆಯನ್ನು ವಿಶ್ಲೇಷಿಸುವುದು.
- ಆಧುನಿಕ ನಾಟಕಗಳ ಮೂಲಕ ಬಸವಣ್ಣನನ್ನು ವಾಸ್ತವೀಕರಿಸಿ ನೋಡುವುದಾಗಿದೆ.
- ಜನಸಾಮಾನ್ಯರಲ್ಲಿ ಬಿಂಬಿತಗೊಂಡಿರುವ ಬಸವಣ್ಣ ನಾಟಕಗಳಲ್ಲಿ ಹೇಗೆ ಭಿನ್ನವಾಗಿದ್ದಾನೆ ಎಂಬುದನ್ನು ಆಧುನಿಕ ನಾಟಕಗಳ ಮೂಲಕ ಚರ್ಚಿಸುವ ಉದ್ದೇಶ ಅಧ್ಯಯನಕ್ಕಿದೆ.
- ಬಸವಣ್ಣ ಮಾಡಿದ ಜನಹಿತ ಕಾರ್ಯಗಳ ಸಮಾಜ ಸುಧಾರಣೆಯ ಹಿನ್ನೆಲೆಯಲ್ಲಿ ಆದ ಪರಿಣಾಮಗಳೇನು ಎಂಬುದನ್ನು ತಿಳಿಯುವ ಉದ್ದೇಶ ಅಧ್ಯಯನಕ್ಕಿದೆ.
- ಚರಿತ್ರೆ ಬಿಂಬಿಸುವ ಬಸವಣ್ಣನಿಗೂ ಆಧುನಿಕ ನಾಟಕಗಳಲ್ಲಿ ವ್ಯಕ್ತಗೊಂಡ ಬಸವಣ್ಣನಿಗೂ ಹೇಗೆ ಭಿನ್ನವಾಗಿದೆ ಎಂಬುದನ್ನು ತೌಲನಿಕವಾಗಿ ನೋಡುವ ಉದ್ದೇಶ ಅಧ್ಯಯನಕ್ಕಿದೆ.
- ಆಧುನಿಕ ಸಂದರ್ಭದಲ್ಲಿ ಸೃಜನಶೀಲ ಪಠ್ಯಗಳಲ್ಲಿ ಕಾಣಿಸಿಕೊಂಡ ಬಸವಣ್ಣ ಸೃಜನೇತರ ಪಠ್ಯಗಳಲ್ಲಿ ಕಾಣಿಸಿಕೊಂಡ ಬಸವಣ್ಣ ಇವೆರಡರ ಸಂಬಂಧವನ್ನು ನೋಡುವ ಉದ್ದೇಶ ಅಧ್ಯಯನಕ್ಕಿದೆ.
- ಆಧುನಿಕ ನಾಟಕಗಳ ಮೂಲಕ ಬಸವಣ್ಣನ ಕಾಲದ ಸ್ಥಿತಿಗತಿಗಳನ್ನು ತಿಳಿದುಕೊಳ್ಳುವ ಉದ್ದೇಶ ಅಧ್ಯಯನಕ್ಕಿದೆ.
- ಆಧುನಿಕ ಕಾಲದ ನಾಟಕಕಾರರು ವಚನಕಾರ ಬಸವಣ್ಣನನ್ನು ಕಥಾನಕಗಳ ಬಸವಣ್ಣನನ್ನು ಯಾವ ಯಾವ ಸಂದರ್ಭದಲ್ಲಿ, ಯಾವ ಯಾವ ನೆಲೆಗಳಲ್ಲಿ ಅರ್ಥ ಮಾಡಿಕೊಂಡಿದ್ದಾರೆ ಎಂಬುದನ್ನು ತಿಳಿಯುವ ಉದ್ದೇಶ ಅಧ್ಯಯನಕ್ಕಿದೆ.
- ಸಾಮಾಜಿಕ ಸಂಸ್ಕೃತಿಯ ಪ್ರತಿಬಿಂಬ ಹಾಗೂ ಸಾಂಸ್ಕೃತಿಕ ಬದುಕು ಕೂಡ ಆಗಿದ್ದ ಬಸವಣ್ಣ ಆಧುನಿಕ ನಾಟಕಗಳಲ್ಲಿ ತೌಲನಿಕ ಚರ್ಚೆಗೆ ಒಳಗಾಗಿಸುವುದು.
- ಬಸವಣ್ಣನ ಕುರಿತು ಬಂದ ಆಧುನಿಕ ನಾಟಕಗಳಲ್ಲಿ ಉಳಿದ ಪಾತ್ರಗಳು ಬಸವಣ್ಣನನ್ನು ನೋಡಿದ ಬಗೆಯನ್ನು ವಿಶ್ಲೇಷಿಸುವುದು.
- ಆಧುನಿಕ ನಾಟಕಗಳ ಮೂಲಕ ಬಸವಣ್ಣನ ನಿಲುವುಗಳ ತಾರ್ಕಿಕ ಹುಡುಕಾಟ ನಡೆಸುವ ಕೆಲಸ ಅಧ್ಯಯನಕ್ಕಿದೆ.

- ಆಧುನಿಕ ನಾಟಕಗಳ ಮೂಲಕ ಬಸವಣ್ಣ ಮತ್ತು ಬಿಜ್ಜಳನ ವಿಭಿನ್ನ ನೆಲೆಗಳನ್ನು ಗುರುತಿಸುವ ಕಾರ್ಯ ಈ ಅಧ್ಯಯನಕ್ಕಿದೆ.
- ಒಬ್ಬ ವ್ಯಕ್ತಿ ಕುರಿತು ಅತಿಹೆಚ್ಚು ನಾಟಕಗಳು ರಚಿತಗೊಂಡಿರುವ ಹಿನ್ನೆಲೆಯನ್ನು ವಿಶ್ಲೇಷಿಸುವುದು.
- ಆಧುನಿಕ ನಾಟಕಗಳಲ್ಲಿ ಬಸವಣ್ಣನನ್ನು ಕುರಿತು ಹೇಗೆ ಗ್ರಹಿಸಿದ್ದಾರೆ ಎಂಬುದನ್ನು ತಿಳಿಯುವುದು ಅಧ್ಯಯನದ ಉದ್ದೇಶವಾಗಿದೆ.

**೧.೩ ಅಧ್ಯಯನದ ವ್ಯಾಪ್ತಿ :**

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಅಪಾರ ಪ್ರಮಾಣದಲ್ಲಿ ಬಸವಣ್ಣನ ಕುರಿತ ಸಾಹಿತ್ಯ ರಚನೆಯಾಗಿದೆ. 'ಬಸವಣ್ಣ ಕುರಿತ ಆಧುನಿಕ ನಾಟಕಗಳ ಅಧ್ಯಯನ' ಎಂಬ ವಿಷಯವನ್ನು ಆಯ್ಕೆ ಮಾಡಿಕೊಂಡು ಆಧುನಿಕ ಕನ್ನಡ ಸಾಹಿತ್ಯದಲ್ಲಿ ಬಸವಣ್ಣನನ್ನು ಕುರಿತು ರಚನೆಯಾಗಿರುವ ನಾಟಕಗಳನ್ನು ಅಧ್ಯಯನಕ್ಕೆ ಒಳಪಡಿಸುವುದು ಕಿರುಪ್ರಬಂಧದ ಉದ್ದೇಶವಾಗಿದೆ. ಆದರೆ ಕನ್ನಡದಲ್ಲಿ ಬಸವಣ್ಣನನ್ನು ಕುರಿತು ಹೆಚ್ಚು ನಾಟಕಗಳು ರಚನೆಯಾಗಿರುವುದನ್ನು ಕಾಣಬಹುದು. ಈ ಎಲ್ಲಾ ನಾಟಕಗಳನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸುವುದು ಸಾಧ್ಯವಾಗದ ಮಾತು. ಇಲ್ಲಿ ಸಮಯದ ಅಭಾವ ಮತ್ತು ಪುಟದ ಮಿತಿ ಇರುವುದರಿಂದ ಕೆಲವೇ ಕೆಲವು ನಾಟಕಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

- ೧೯೭೩ ರಲ್ಲಿ ಪ್ರಕಟಗೊಂಡ ಪಿ. ಲಂಕೇಶರ – ಸಂಕ್ರಾಂತಿ
- ೧೯೮೬ ರಲ್ಲಿ ಪ್ರಕಟಗೊಂಡ ಹೆಚ್.ಎಸ್ ಶಿವಪ್ರಕಾಶರ – ಮಹಾಚೈತ್ರ
- ೧೯೯೦ ರಲ್ಲಿ ಪ್ರಕಟಗೊಂಡ ಗಿರೀಶ್ ಕಾರ್ನಾಡರ – ತಲೆದಂಡ
- ೨೦೧೧ ರಲ್ಲಿ ಪ್ರಕಟಗೊಂಡ ಚಂದ್ರಶೇಖರ ಕಂಬಾರರ – ಶಿವರಾತ್ರಿ

**೧.೪ ಅಧ್ಯಯನದ ವಿಧಾನ :**

ಪ್ರಸ್ತುತ ಅಧ್ಯಯನವು ತುಂಬ ಮಹತ್ವದ್ದಾಗಿದೆ. ವೈವಿಧ್ಯಮಯವಾಗಿ ರಚನೆಗೊಂಡಿರುವ ಬಸವಣ್ಣನನ್ನು ಕುರಿತ ನಾಟಕಗಳು ವಚನ ಚಳುವಳಿಯನ್ನು ಪ್ರತಿನಿಧಿಸುತ್ತವೆ. ಮುಖ್ಯವಾಗಿ ಇಲ್ಲಿ ಬಸವಣ್ಣನ ನಿಲುವುಗಳು ತಾರ್ಕಿಕ ಹುಡುಕಾಟ ನಡೆದಿದೆ. ಹೀಗಾಗಿ ಸಾಮಾಜಿಕ ಮತ್ತು ಸಾಹಿತ್ಯಿಕವಾಗಿ ನಡೆದ ಈ ಚಳುವಳಿ ತುಂಬ ಕುತೂಹಲಕರವಾದುದಾಗಿದೆ. ಇದು ಸಮಕಾಲೀನ ಮೌಲ್ಯಗಳ ಧ್ವನಿ ಎನಿಸಿದ್ದರಿಂದ ಈ ಕುರಿತು ಚರ್ಚೆ, ಸಂವಾದ, ವಿಮರ್ಶೆ, ರಚನೆಗಳು ಇಂದಿಗೂ ನಡೆಯುತ್ತಲೇ ಇವೆ. ಆಧುನಿಕ ಕನ್ನಡ ನಾಟಕಗಳಲ್ಲಿ ಬಸವಣ್ಣನನ್ನು ನಿರೂಪಿಸಿದ ಬಗೆ ಹೇಗೆ? ಪ್ರಸ್ತುತ ಸಂದರ್ಭಗಳಲ್ಲಿ ಯಾವ ಪರಿಣಾಮಗಳನ್ನು ಬೀರುತ್ತಿವೆ ಎಂಬುದನ್ನು ಮುಖ್ಯವಾಗಿರಿಸಿಕೊಂಡು ಪ್ರಸ್ತುತ ನಾಟಕಗಳು ಏನನ್ನು ಧ್ವನಿಸಲು ಪ್ರಯತ್ನಿಸಿವೆ ಎಂಬುದನ್ನು ಕಂಡುಕೊಳ್ಳುವ ನೆಲೆಯಲ್ಲಿ ನಾಟಕಗಳ ವಿಶ್ಲೇಷಣಾ ವಿಧಾನವನ್ನು ಅನುಸರಿಸಿದೆ.

೧. ಪ್ರಾಚೀನ – ಆಧುನಿಕ ಎಂಬ ಎರಡು ಪರಿಕಲ್ಪನೆಯಲ್ಲೂ ಒಂದೇ ವಸ್ತು ಹೇಗೆ ರೂಪುಗೊಳ್ಳುತ್ತದೆ ಹಾಗೆ ರೂಪುಗೊಳ್ಳುವಾಗ ಆಶಯ, ಭಾಷೆ, ಪರಿಣಾಮ ಇತ್ಯಾದಿಗಳು ಮುಖ್ಯ

ನೆಲೆಗಳಿಗೆ ಬರುತ್ತವೆ. ಇವುಗಳ ಹಿಂದಿನ ತಾತ್ವಿಕತೆಯ ವಿಧಾನ ಯಾವುದೆಂದು ಗುರುತಿಸುವ ಪ್ರಯತ್ನ ಮಾಡಲಾಗಿದೆ.

೨. ಚರಿತ್ರೆ ಮತ್ತು ವಾಸ್ತವ ಎಂಬುವ ಅಧ್ಯಯನ ವಿಧಾನ ನಮಗೆ ವಸಾಹತುಶಾಹಿ ಶಿಕ್ಷಣ ಪ್ರಭಾವದಿಂದ ಹುಟ್ಟಿಕೊಂಡಿದ್ದು. ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಈ ವಿಭಿನ್ನತೆ ಇರಲಿಲ್ಲ. ಪ್ರಸ್ತುತ ಅಧ್ಯಯನದಲ್ಲಿ ಚರಿತ್ರೆ-ವಾಸ್ತವ ಎನ್ನುವ ಪರಿಕಲ್ಪನೆಗಳ ಹಿಂದಿನ ತಾತ್ವಿಕತೆ ವಿಧಾನ ಯಾವುದೆಂಬುದನ್ನು ಅರಿಯುವ ಪ್ರಯತ್ನ ಮಾಡಲಾಗಿದೆ.

## ಅಧ್ಯಾಯ-೨

## ಈವರೆಗೆ ನಡೆದಿರುವ ಅಧ್ಯಯನಗಳ ಸಮೀಕ್ಷೆ

ಯಾವುದೇ ಒಂದು ಅಧ್ಯಯನವನ್ನು ಕೈಗೊಳ್ಳುವುದಕ್ಕಿಂತ ಮುಂಚೆ ಆ ಅಧ್ಯಯನಕ್ಕೆ ಸಂಬಂಧಿಸಿದಂತೆ ಇದುವರೆಗೆ ನಡೆದಿರುವ ಅಧ್ಯಯನಗಳ ಸಮೀಕ್ಷೆ ಮುಖ್ಯವಾದುದು.

ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ "ಬಸವಣ್ಣನನ್ನು ಕುರಿತ ಆಧುನಿಕ ನಾಟಕಗಳ ಕುರಿತು ಅನೇಕ ವಿಮರ್ಶಾ ಲೇಖನಗಳು ಬಂದಿವೆ. ಸಂಶೋಧನೆಗೆ ಆಯ್ಕೆ ಮಾಡಿಕೊಂಡ ವಿಷಯದ ಬಗ್ಗೆ ಪೂರಕವಾದ ಕೆಲವು ಮಾಹಿತಿಗಳನ್ನೊಳಗೊಂಡ ಪ್ರಕಟವಾಗಿರುವ ಪುಸ್ತಕ ಮತ್ತು ಲೇಖನಗಳನ್ನು ಈ ಅಧ್ಯಾಯದಲ್ಲಿ ಸಮೀಕ್ಷೆ ಮಾಡಲಾಗಿದೆ.

ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಆಧುನಿಕ ಕನ್ನಡ ಸಾಹಿತ್ಯ ರೂಪವಾದ ನಾಟಕಗಳಲ್ಲಿ ಬಸವಣ್ಣನನ್ನು ಕುರಿತು ಅನೇಕ ಗ್ರಂಥಗಳು ಹೊರಬಂದಿವೆ. ಈ ವಿಮರ್ಶೆಯ ಉದ್ದೇಶವೆಂದರೆ ನನ್ನ ಅಧ್ಯಯನ ಉದ್ದೇಶಕ್ಕೆ ಸಂಬಂಧಿಸಿದಂತೆ ಈಗಾಗಲೇ ಚರ್ಚೆಗೆ ಒಳಪಟ್ಟ ವಿಷಯಗಳಿಗಿಂತಲೂ ಭಿನ್ನವಾದ ರೀತಿಯಲ್ಲಿ ಏನನ್ನಾದರೂ ಹೇಳಬಹುದೇ ಎಂಬುದಕ್ಕೆ ಈ ಸಮೀಕ್ಷೆ ಸಹಕಾರವಾಗುತ್ತದೆ.

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಶರಣರನ್ನು ಕುರಿತು ರಚನೆಯಾದ ನಾಟಕಗಳ ಬಗೆಗೆ ವಿಮರ್ಶಾ ಪ್ರವೃತ್ತಿ ಹೆಚ್ಚಾಗುತ್ತಿರುವುದು ಒಂದು ವಿಶೇಷವೇ ಸರಿ. ಹೀಗಾಗಿ ಶರಣರನ್ನು ಕುರಿತು ಹೊರಬಂದ ನಾಟಕಗಳ ಮೇಲೆ ವಿಮರ್ಶೆಯ ಕಾರ್ಯವು ಹೆಚ್ಚಾಗಿ ಕಂಡುಬಂದಿದ್ದರೂ ಸ್ವಲ್ಪ ಮಟ್ಟಿಗೆಯಾದರೂ ಹಲವು ವಿಮರ್ಶಕರು ಈ ಕೆಲಸ ಕೈಗೊಂಡಿರುವುದು ಕಂಡುಬರುತ್ತದೆ. ಅಂಥವರಲ್ಲಿ ಎಸ್.ಜಯರಾಮ್, ಆರ್.ವಿ.ಭಂಡಾರಿ, ಎ.ಆರ್.ನಾಗಭೂಷಣ, ಡಾ.ಬಸವರಾಜಮಲಶೆಟ್ಟಿ, ಪ್ರೊ.ಆರ್.ರಾಚಪ್ಪ, ಪ್ರೊ.ಬಿ.ವಿರೂಪಾಕ್ಷಪ್ಪ, ಜಿ.ಎಸ್.ಅಮೂರ, ಟಿ.ಪಿ.ಅಶೋಕ, ಮಾಧವ ಕುಲಕರ್ಣಿ, ಡಾ.ಎಚ್.ಎಂ.ಮರುಳಸಿದ್ಧಯ್ಯ ಇನ್ನೂ ಅನೇಕರು ತಮ್ಮ ವಿಮರ್ಶಾ ಲೇಖನಗಳ ಮೂಲಕ ಶರಣರ ನಾಟಕಗಳ ಬಗೆಗೆ ವಿಶೇಷವಾಗಿ ಚರ್ಚಿಸಿದ್ದಾರೆ.

ನನ್ನ ಅಧ್ಯಯನದ ವಿಷಯವೇ ಬಸವಣ್ಣನವರೇ ಆಗಿರುವುದರಿಂದ ಅವರ ಜೀವನಕ್ಕೆ ಸಂಬಂಧಿಸಿದಂತೆ ರಚನೆಯಾಗಿರುವ ನಾಟಕಗಳ ಸಂಖ್ಯೆ ಹೆಚ್ಚಾಗಿವೆ. ಆದರೆ ಅವರ ಕುರಿತು ಬಂದಿರುವ ಗ್ರಂಥಗಳ ಮೇಲೆ ವಿಮರ್ಶೆಗೆ ಒಳಪಟ್ಟ ಕೃತಿಗಳು ಬಹಳ ಕಡಿಮೆ.

ಗಿರೀಶ್ ಕಾರ್ನಾಡರವರ ನಾಟಕಗಳ ವಿಮರ್ಶೆ ಎಂಬ ಸಂಕಲನವನ್ನು ಸಂಪಾದಿಸಿದ ಕೃಷ್ಣಮೂರ್ತಿ ಚಂದರ್ ರವರು ಬಸವಣ್ಣನವರ ಕೇಂದ್ರಬಿಂದುವಾಗಿ ವಿಷಯಗಳನ್ನೊಳಗೊಂಡ ಪಿ.ಲಂಕೇಶರ 'ಸಂಕ್ರಾಂತಿ', ಗಿರೀಶ್ ಕಾರ್ನಾಡರ 'ತಲೆದಂಡ', ಎಚ್.ಎಸ್.ಶಿವಪ್ರಕಾಶರ 'ಮಹಾಚೈತ್ರ'. ಈ ನಾಟಕಗಳ ಕುರಿತು ವಿವಿಧ ಲೇಖಕರಿಂದ ಚರ್ಚೆಯಾದ ಲೇಖನಗಳು ಇಲ್ಲಿ ಸೇರಿವೆ.

ಜಿ.ಎಸ್.ಆಮೂರರವರ 'ಗಿರೀಶ್ ಕಾರ್ನಾಡರ ತಲೆದಂಡ ಮತ್ತು ಅಗ್ನಿ ಮತ್ತು ಮಳೆ' ಎಂಬ ಲೇಖನದಲ್ಲಿ 'ತಲೆದಂಡ' ಕುರಿತಾಗಿ ತಿಳಿಸಿರುವ ವಿಚಾರಗಳು ಸುಮಾರು ಮೂರು ಪುಟಗಳ

ಸವಿಸ್ತಾರವನ್ನು ಹೊಂದಿದೆ. ಪ್ರಾರಂಭದಲ್ಲಿ ನಾಟಕ ರಚನೆಗೆ ಸಾಮಾಜಿಕ ಮತ್ತು ರಾಜಕೀಯ ಪ್ರೇರಣೆಯನ್ನು ತಿಳಿಸುತ್ತಾ ವಚನ ಚಳುವಳಿಯ ಬೆನ್ನು ಹಿಡಿದು ಒಳಪ್ರವೇಶಿಸಿ ಅದರಲ್ಲಿನ ಸಣ್ಣಾತಿ ಸಣ್ಣ ಘಟನೆಯನ್ನು ಸಹ ಬಿಡದೇ ಲೇಖಕರು ತಮ್ಮ ನಾಟಕದಲ್ಲಿ ಸಾಂದರ್ಭಿಕವಾಗಿ ಬಳಸಿಕೊಂಡಿರುವ ವಿಷಯಗಳತ್ತ ಗಮನಹರಿಸುವುದರಲ್ಲಿ ವಿಮರ್ಶಕರು ಯಶಸ್ವಿಯಾಗಿದ್ದಾರೆ.

"ಎಂ.ಎಂ.ಕಲಬುರ್ಗಿ ಅವರ ಅಭಿನಂದನಾ ಗ್ರಂಥದಲ್ಲಿ(ಮಹಾಮಾರ್ಗ) ಸಿದ್ಧಲಿಂಗ ಪಟ್ಟಣಶೆಟ್ಟಿಯವರು 'ಕೆಟ್ಟಿತುಕಲ್ಯಾಣ'ದ ಕುರಿತು ಒಂದು ಲೇಖನವನ್ನು ಬರೆದಿದ್ದಾರೆ. ಅದರಲ್ಲಿ ಇವರು ಬಾಗೇವಾಡಿ, ಕೂಡಲಸಂಗಮ ಮತ್ತು ಕಲ್ಯಾಣದಲ್ಲಿ ವಿಸ್ತರಿತಗೊಂಡ ಬಸವಣ್ಣನ ಸಮಗ್ರ ಬದುಕಿನ ಅವನ ನೋವು-ನಲಿವುಗಳ ವಿಚಾರ ಕ್ರಾಂತಿಗಳ ಸ್ಪಷ್ಟ ತಿಳುವಳಿಕೆ ಕಲಬುರ್ಗಿಯವರ ನಾಟಕದಲ್ಲಿ ಒಂದು ಪ್ರಶಸ್ತಿ, ಆಪ್ತ ಬರಹದಂತೆ ವ್ಯಕ್ತವಾಗಿದೆ. ಅಗ್ರಹಾರ ಸಂಸ್ಕೃತಿಯಿಂದ ಬೇಸತ್ತು ದೇವಾಲಯ ಪರಿಸರದಲ್ಲಿ ಹೊಸ ಸಂಸ್ಕೃತಿಯನ್ನು ಅರಸಿಹೋದ ಬಸವಣ್ಣ ಅಲ್ಲಿಯೂ ನಿರಾಶನಾದ. ಕಡೆಗೆ ರಾಜ ಸಂಸ್ಕೃತಿಯಲ್ಲಿ ಸಾಕಷ್ಟು ಕ್ರಾಂತಿ ಮಾಡಿದರೂ ಈ ಮೂರು ಸಂಸ್ಕೃತಿಗಳು ಎದುರು ನಿಂತು ಅವನನ್ನು ಮುಳಗಿಸಿದ ಚಿತ್ರ ಇಲ್ಲಿದೆ. ಅರ್ಥ ಚಿಂತನೆ, ಸಾಮಾಜಿಕ ವ್ಯವಹಾರಗಳು, ದೇವ-ಧರ್ಮ ಕುರಿತ ವಿಚಾರಗಳಲ್ಲಿ ಯಾವುದೇ ದ್ವಂದ್ವ ಅಥವಾ ತಾಕಲಾಟ ಅವನಲ್ಲಿಲ್ಲ. ಅವನ ಬಾಲ್ಯದಿಂದ ಕಲ್ಯಾಣ ನಿರ್ಗಮನದವರೆಗಿನ ಎಲ್ಲಾ ಘಟನಾವಳಿಗಳನ್ನು ದೃಶ್ಯ ಮಾಧ್ಯಮದಲ್ಲಿ ತೋರಿಸಬೇಕೆಂದು ನಿರ್ಧರಿಸಿ ಕ್ರಮವಾಗಿ ಬರೆಯುತ್ತಾ ಹೋಗಿದ್ದಾರೆ".[೧]

ಆರಂಭದಿಂದ ಕ್ರಮವಾಗಿ ವಸ್ತುವನ್ನು ವಿವರಿಸುತ್ತಾ ಚರ್ಚಿಸುತ್ತಾ ಹೋಗುವುದರಿಂದ ಇದು ಕೇವಲ ಓದು ನಾಟಕವಾಗಿ ಮಾತ್ರ ಉಳಿಯುತ್ತದೆಯೇ ಹೊರತು, ಯಾವ ದೃಷ್ಟಿಯಿಂದಲೂ ಇದನ್ನು ರಂಗಕ್ಕೆಅಳವಡಿಸುವ ಪ್ರಯತ್ನವೂ ಯಶಸ್ವಿಯಾಗಲಾರದು ಎಂದಿದ್ದಾರೆ.

ಆರಂಭದಿಂದ ಕಡೆಯವರೆಗೆ ಬರುವ ಬಸವಣ್ಣನ ಪಾತ್ರ ಸಹ ಮನದ ಮೇಲೆ ಮೂಡಲಾರದೇ ಮಾತು ಮಾತಿಗೆ ದೃಶ್ಯ ದೃಶ್ಯಕ್ಕೆ ಪಟಪಟ ಬಂದು ಹೋಗುವ ಅಮುಖ್ಯ ಮುದ್ರೆಯಾಗಿ ಮಾತ್ರ ಉಳಿಯುತ್ತದೆ. ಇಷ್ಟೊಂದು ವಿಷಯ, ವಿಚಾರ ಭಾವಗಳನ್ನು ತುಂಬಿಕೊಂಡಿರುವ ಇಲ್ಲಿಯ ಬಸವಣ್ಣ ಸಹ ತನ್ನ ಮಾತುಗಳನ್ನು ಹೇಳುತ್ತಾನೆ, ಉಗುಳುತ್ತಾನೆ, ಆಡುವುದಿಲ್ಲ, ನುಡಿಯುವುದಿಲ್ಲ, ಬಿಂಬಿಸುವುದಿಲ್ಲ. ಆಯಾ ದೃಶ್ಯ ಪ್ರಸಂಗಗಳಲ್ಲಿ ಪ್ರಧಾನವೆನಿಸುವಂತೆ ಪ್ರವೇಶಿಸುವ ಪಾತ್ರಗಳು ಕೇವಲ ನಿರ್ಜೀವ ಬಣ್ಣದ ಗೊಂಬೆಗಳಂತೆ ಬಂದು ಮುಖ ತೋರಿಸಿ ಕಲಿಸಿದ್ದನ್ನು ಒಪ್ಪಿಸಿ ಹೋಗಿಬಿಡುತ್ತವೆ ಎಂದು ಅಭಿಪ್ರಾಯಪಡುತ್ತಾರೆ. ಅಲ್ಲದೇ "ಜನರಿಗೆ ಬಸವಣ್ಣನವರ ಹೋರಾಟವನ್ನು ತೋರಿಸಿಬಿಡಬೇಕು, ಸಿದ್ಧಾಂತಗಳನ್ನು ಕೇಳಿಸಿಕೊಡಬೇಕು ಎಂಬ ಉದ್ದೇಶ ಹೊಂದಿರುವ ಈ ನಾಟಕದ ಪ್ರದರ್ಶನ ಪ್ರಸಂಗದಲ್ಲಿ ಅಭಿನಯದಷ್ಟೇ ಮಾತುಗಳಿಗೂ ಮಹತ್ವ ಕೊಡಬೇಕು" ಎಂದು ಕಲಬುರ್ಗಿ ತಮ್ಮ ಮಾತಿನಲ್ಲಿ ಹೇಳಿದ್ದಾರೆ. ಆದರೆ ಇಲ್ಲಿಯ ಮಾತುಗಳು ತಮ್ಮ ಮಹತ್ವಿನ ಭಾರದಿಂದ ಸ್ವತಃ ನಡುಗುತ್ತಿರುವುದರಿಂದ ಅವುಗಳ ಮೂಲಕ ಅಭಿನಯಕ್ಕೆ ಅವಕಾಶವೇ ಇಲ್ಲದಂತಾಗಿರುವುದು ಅವರಿಗೆ ತಿಳಿಯದೇ ಹೋಗಿದೆ ಎಂದು ವಿಮರ್ಶಿಸಿದ್ದಾರೆ.

ಡಾ.ದಿವ್ಯ ಸ್ಪತಿ ಹೆಗಡೆಯವರು ಆಧುನಿಕ ಕನ್ನಡ ವಿಮರ್ಶ ಸಾಹಿತ್ಯದಲ್ಲಿ ತಮ್ಮದೇ ಆದ ಛಾಪನ್ನು ಮೂಡಿಸಿದ್ದಾರೆ. ಅವರು ಬರೆದಿರುವ 'ಕನ್ನಡ ನವ್ಯ ನಾಟಕ ಮತ್ತು ಪಾಶ್ಚಾತ್ಯ ಪ್ರಭಾವ' ಎಂಬ ಕೃತಿಯಲ್ಲಿ ಸಂಕ್ರಾಂತಿ ಮತ್ತು ನಾನೇ ಬಿಜ್ಜಳ ಎಂಬ ನಾಟಕಗಳ ಕುರಿತು ಹೀಗೆ ಅಭಿಪ್ರಾಯಪಡುತ್ತಾರೆ.

ಸಂಕ್ರಾಂತಿ, ನಾನೇ ಬಿಜ್ಜಳ ಕೃತಿಗಳು ಬಸವಣ್ಣನ ಸಂಬಂಧದ ಐತಿಹಾಸಿಕ ಕತೆಯನ್ನು ತೆಗೆದುಕೊಂಡು ಒಂದು ಸಾಮಾಜಿಕ ಸಂಕ್ರಮಣ ಕಾಲದ ಚಿತ್ರ ಕೊಡುವಲ್ಲಿ ಲಂಕೇಶರು ಯತ್ನಿಸಿದ್ದಾರೆ. ವಿಮರ್ಶಾ ಕ್ಷೇತ್ರದಲ್ಲಿ ತಮ್ಮನ್ನು ಗುರುತಿಸಿಕೊಂಡು ವಿಮರ್ಶೆಯ ಮೌಲ್ಯವನ್ನು ಮೈಗೂಡಿಸಿಕೊಂಡ ಎ.ಆರ್.ನಾಗಭೂಷಣರವರ 'ನಾಟಕ ಪ್ರವೇಶಿಕೆ' ಕೃತಿಯಲ್ಲಿ ಸಂಕ್ರಾಂತಿ ಮತ್ತು ತಲೆದಂಡ ನಾಟಕವನ್ನು ಕುರಿತು ಅವರ ಆಲೋಚನೆ ಲಹರಿಯ ಕೆಲವು ಅಂಶಗಳು ಮಹತ್ವವೆನಿಸುತ್ತವೆ. ಉಳಿದೆಲ್ಲಾ ನಾಟಕಗಳಿಗಿಂತಲೂ ಹೆಚ್ಚು ಮಹತ್ವವನ್ನು ಪಡೆದಿರುವ ಸಂಕ್ರಾಂತಿ ನಾಟಕದಲ್ಲಿ ಬಸವಣ್ಣ ಮತ್ತು ಬಿಜ್ಜಳನ ಕಾಲದ ಸ್ಥಿತಿಗತಿಗಳನ್ನು ಅವಲೋಕಿಸುತ್ತಾ ಮನುಷ್ಯ ಸಂಬಂಧಗಳನ್ನು ನಾಶ ಮಾಡಿಸುವ ಜಾತಿಪದ್ಧತಿ ಬಗ್ಗೆ ಆಕ್ರೋಶ ಇಲ್ಲಿ ಎದ್ದು ಕಾಣುತ್ತದೆ.

ಈ ನಾಟಕದಲ್ಲಿ ಬರುವ ಪ್ರಮುಖ ವಿಷಯವನ್ನು ಪ್ರತಿಪಾದಿಸುವ ಪಾತ್ರಗಳಿಂದ ಬ್ರಾಹ್ಮಣರ ಜಾತಿಯ ಭಾಷೆ ಮತ್ತು ಹೊಲೆಯ ಜಾತಿಯ ರುದ್ರರ ಮದುವೆ ಪ್ರಕರಣದಿಂದ ಅಲ್ಲಿಯ ವ್ಯವಸ್ಥೆಯನ್ನು ಪರಿಶೀಲಿಸುವಂತೆ ಕಾಣುತ್ತದೆ. ಎರಡು ಎಳೆಗಳನ್ನು ಪ್ರತಿನಿಧಿಸುವ ಬಸವಣ್ಣನವರನ್ನು ಸಂಘರ್ಷಿಸುವ ಚಿತ್ರ ಇಲ್ಲಿದೆ.

ಸಂಶೋಧಕರು ಹಾಗೂ ವಿಮರ್ಶಕರಾದ ಡಾ.ಬಸವರಾಜ ಮಲಶೆಟ್ಟಿಯವರು ಶರಣರನ್ನು ಕುರಿತು ಮತ್ತು ಸಾಹಿತ್ಯವನ್ನು ಕುರಿತು ಅನೇಕ ವಿಮರ್ಶಾತ್ಮಕ ಲೇಖನಗಳನ್ನು ಬರೆದಿದ್ದಾರೆ. ಅವರು ವಿದ್ಯಾಶ್ರೀ ಸ್ವರ್ಣ ಸಂಚಿಕೆಗೆ ಬರೆದ "ಶರಣರ ಕುರಿತ ನಾಟಕಗಳು ಎಂಬ ಲೇಖನದಲ್ಲಿ ಕೆಟ್ಟಿತ್ತು ಕಲ್ಯಾಣ ಹಾಗೂ ಜಗಜ್ಯೋತಿ ಬಸವೇಶ್ವರ ನಾಟಕಗಳನ್ನು ಕುರಿತಂತಹ ವಿಮರ್ಶಾತ್ಮಕ ವಿಚಾರಗಳು ಇಲ್ಲಿ ಅಭಿವ್ಯಕ್ತವಾಗಿವೆ". ಡಾ.ಎಂ.ಎಂ.ಕಲಬುರ್ಗಿಯವರು ಬರೆದಿರುವ 'ಕೆಟ್ಟಿತ್ತುಕಲ್ಯಾಣ' ಎಂಬ ನಾಟಕವನ್ನು ಕುರಿತಂತೆ ಎಂ.ಎಂ.ಕಲಬುರ್ಗಿಯವರ ಸಂಶೋಧನೆಯ ಒಡಲುಗಳು, ಕಲ್ಪನೆಗಳು, ಸನ್ನಿವೇಶಗಳು ಅವರ ನಾಟಕದಲ್ಲಿ ನಿಂತಿವೆ. ಕಲಬುರ್ಗಿಯವರು ಒಬ್ಬ ಪ್ರಬುದ್ಧ ಸಂಶೋಧಕರಾಗಿರುವುದರಿಂದ ಇತಿಹಾಸದ ಆಧಾರದ ಮೇಲೆ ನಾಟಕ ರಚಿಸಿದಂತೆ ತೋರುತ್ತದೆ.

ಈ ಕೃತಿಯನ್ನು ಕುರಿತು ಮಲಶೆಟ್ಟಿಯವರ ಅಭಿಪ್ರಾಯ ಈ ಕೆಳಗಿನಂತಿದೆ. ಸಮಕಾಲೀನ ಸಂಗತಿಗಳ ನೇರ ನೆರಳುಗಳು ನಾಟಕದ ತುಂಬಾ ವ್ಯಾಪಿಸಿರುವುದರಿಂದ ಒಟ್ಟಾರೆ ನಿರೂಪಣೆ ತೀರ ವ್ಯಾಜ್ಯವೆನಿಸುತ್ತದೆ. ಬಸವಣ್ಣನವರ ಪವಾಡವನ್ನು ವೈಭವೀಕರಿಸುವ ಭರದಲ್ಲಿ ಅವುಗಳನ್ನು ಹೊಸದಾಗಿ ಅರ್ಥೈಸುವುದರಲ್ಲಿ ಅಪಕ್ವ ಮತ್ತು ಅಪಾಯಕಾರಿ ವಿಚಾರಗಳನ್ನು ತುರುಕಲಾಗಿದೆ. ಭಂಡಾರ ರಕ್ಷಕನಾದ ಬಸವಣ್ಣನ ರಾಜ್ಯಭಂಡಾರ, ರಾಜ್ಯದಲ್ಲಿ ಪ್ರಜೆಗಳಿಂದ ನಿಮ್ಮದು ಅದನ್ನು ನೀವೇ ಬೆಳೆಸಿದ್ದೀರಿ ಎಂದು ಹೇಳುತ್ತಾನೆ. ಈ ವಿಚಾರ ಅಸಮಂಜಸ ಎಂಬುದು ವಿಮರ್ಶಕರ ಅಭಿಪ್ರಾಯವಾಗಿದೆ.

ಜಗಜ್ಯೋತಿ ಬಸವೇಶ್ವರ ಅ.ನ.ಕೃ.ರವರ ನಾಟಕದ ಮಾತಾಗಿದೆ. ಪುರಾಣಗಳಲ್ಲಿ ಚಿತ್ರಿತವಾಗಿರುವ ಮತೀಯವಾದ ಬಸವಣ್ಣನ ಚಿತ್ರಣವನ್ನು ಅಳಿಸಿ ದಯೆ, ಶಾಂತಿ, ಸಹನೆ, ಸೌಹಾರ್ದತೆಗಳ ವಿಶ್ವಧರ್ಮ ಬಸವಣ್ಣನ ಚಿತ್ರ ನೀಡುವುದು ಅ.ನ.ಕೃ.ರವರ ಉದ್ದೇಶವಾಗಿದೆ.

ಬಸವ ಬಿಜ್ಜಳರ ಸಂಬಂಧವನ್ನು ಅವರ ಕೌಟುಂಬಿಕವಾದ ಪ್ರೀತಿ, ಸಂಬಂಧ ಬಿಜ್ಜಳನ ಹೆಂಡತಿ ಶಾಂತಿಮತಿ ಮತ್ತು ಕುಮಾರನೊಂದಿಗೆ ಬಸವಣ್ಣ ತುಂಬಾ ಹತ್ತಿರದಿಂದ ನಡೆದುಕೊಳ್ಳುತ್ತಾರೆ. ಬಸವಣ್ಣನ ಕಲ್ಯಾಣವೆಂತಹದ್ದು ಎಂಬುದನ್ನು ಒಬ್ಬ ಪೌರ ಹೇಳುತ್ತಾನೆ. ಕಲ್ಯಾಣದಲ್ಲಿ ಸೈನ್ಯದ ಕಾಟವಿಲ್ಲ. ಶ್ರೀಮಂತರ

ಬಾಧೆಯಿಲ್ಲ, ಅಧಿಕಾರಿಗಳ ಸುಲಿಗೆಯಿಲ್ಲ. ಇಂತಹ ಸುಖನಗರ ರಾಜ್ಯವನ್ನು ರೂಢಿಗೆ ತಂದ ಬಸವಣ್ಣನ ಬಗೆಗೆ ಗೌರವ ಮೂಡಿದವು ಎಂದು ಅಭಿಪ್ರಾಯಪಡುತ್ತಾರೆ. ಈ ಬಗೆಯ ವಸ್ತು ಪ್ರಸ್ತುತ ಸಂದರ್ಭದಲ್ಲಿನ ರಾಜಕೀಯ, ಸಾಮಾಜಿಕ, ಆರ್ಥಿಕ, ಧಾರ್ಮಿಕ ಜೀವನಕ್ಕೆ ಸಮನ್ವಯಗೊಳಿಸಿರುವುದು ಬಹಳ ಅವಶ್ಯಕವೆನಿಸುತ್ತದೆ.

"ಬಸವಣ್ಣನ ವಚನಗಳು: ಸಾಂಸ್ಕೃತಿಕ ಮುಖಾಮುಖಿಯನ್ನು ಅಮರೇಶ ನುಗಡೋಣಿಯವರು ಸಂಪಾದಿಸಿದ್ದಾರೆ. ಅದರಲ್ಲಿ ಬಂಜೆಗೆರೆ ಜಯಪ್ರಕಾಶರ ಲೇಖನವಾದ "ಆಧುನಿಕ ಪಠ್ಯಗಳು: ಬಸವಣ್ಣನನ್ನು ಕುರಿತು ಗ್ರಹಿಕೆಗಳು" ಎಂಬ ಲೇಖನದಲ್ಲಿ ವಚನ ಚಳುವಳಿಯ ಕೇಂದ್ರ ವಸ್ತುವೇ ಸಮಾಜದಲ್ಲಿದ್ದ ಜಾತಿವ್ಯವಸ್ಥೆ ತನಗಿಂತ ಹಿಂದಿದ್ದ ಸಂಸ್ಕೃತಿಯು ಜಾತಿ ಆಧಾರಿತವಾಗಿ ಮೇಲು-ಕೀಳುಗಳನ್ನು ಸೃಷ್ಟಿಸಿ ಮನುಷ್ಯರನ್ನು ಅಧೋಗತಿಗಳಿಸಿತ್ತು. ಅಂತಹ ವ್ಯವಸ್ಥೆಯ ನಿರಾಕರಣೆಯಿಂದಲೇ ಶರಣ ಧರ್ಮ ತನ್ನ ಹೊಸ ನಡಿಗೆಯನ್ನು ಆರಂಭಿಸಿತು. ಆದರೆ ೧೫-೧೬ನೇ ಶತಮಾನದ ಪಠ್ಯಗಳಲ್ಲಿ ಈ ಅಂಶಕ್ಕೆ ಪ್ರಾಧ್ಯಾನ್ಯತೆಯಿಲ್ಲ ಎಂದು ಅಭಿಪ್ರಾಯಪಡುತ್ತಾರೆ".[೨]

ಇವರು ಈ ಲೇಖನದಲ್ಲಿ 'ಸಂಕ್ರಾಂತಿ', ಮಹಾಚೈತ್ರ' ಹಾಗೂ 'ತಲೆದಂಡ' ಈ ಮೂರು ಕೃತಿಗಳು ನಮ್ಮ ವರ್ತಮಾನದ ದ್ವಂದ್ವ ಹಾಗೂ ಎಚ್ಚರಗಳ ಸಮೇತ ಬಸವಣ್ಣನನ್ನು ಆತನ ಚೇತನವನ್ನು ಹಾಗೂ ಪ್ರಸ್ತುತತೆಯನ್ನು ನಮ್ಮ ಮುಂದಿಟ್ಟಿವೆ ಎಂದು ಅಭಿಪ್ರಾಯಪಡುತ್ತಾರೆ.

'ಸಾಧನೆ' ಎಂಬ ತ್ರೈಮಾಸಿಕ ಪುಸ್ತಕದಲ್ಲಿ ಡಾ.ಮಂಜುನಾಥ ಪಾಳ್ಯರವರು ಬರೆದ 'ಮಹಾಚೈತ್ರ, ತಲೆದಂಡ, ಮತ್ತು ಶಿವರಾತ್ರಿ ನಾಟಕಗಳಲ್ಲಿನ ಬಸವ ಬಿಜ್ಜಳರ ವಿಭಿನ್ನ ನೆಲೆಗಳು' ಎಂಬ ಲೇಖನದಲ್ಲಿ ಈ ರೀತಿಯಾಗಿ ಅಭಿಪ್ರಾಯಪಡುತ್ತಾರೆ.

"೧೨ನೇ ಶತಮಾನದ ಎಚ್ಚೆತ್ತ ಶರಣರ ಮೇಲೆ ರಾಜಪ್ರಭುತ್ವಮತ್ತು ಪುರೋಹಿತಶಾಹಿ ವ್ಯವಸ್ಥೆ ನಡೆಸಿದ ಹಲ್ಲೆಯು ಎಷ್ಟೇ ಶತಮಾನಗಳು ಉರುಳಿದರೂ ಅದು ಪ್ರಜ್ಞಾವಂತರನ್ನು ಕಾಡದೆ ಬಿಡುವುದಿಲ್ಲ. ಹೊಸ ಚಿಂತನೆಗೆ ಸಾಕಷ್ಟು ಎಡೆ ಮಾಡಿಕೊಟ್ಟಿದೆ. ಇದಕ್ಕೆ ಸಂಬಂಧಿಸಿದಂತೆ ಕನ್ನಡ ಸಾಹಿತ್ಯದಲ್ಲಿ ರಚನೆಯಾಗಿರುವ ಕೃತಿಗಳು,ಆ ಕಾಲದ ಚಳುವಳಿಯನ್ನು ಅದರ ಮಗ್ಗಲುಗಳನ್ನು ಇಂದಿನ ಸಮಾಜಕ್ಕೆ ವಿವರಿಸುತ್ತವೆ. ಈ ನಿಟ್ಟಿನಲ್ಲಿ ಗಿರೀಶ್ ಕಾರ್ನಾಡ್, ಎಚ್.ಎಸ್.ಶಿವಪ್ರಕಾಶ್ ಮತ್ತು ಚಂದ್ರಶೇಖರ್ ಕಂಬಾರರು ತಮ್ಮ ನಾಟಕಗಳಲ್ಲಿ ಚರಿತ್ರೆಯನ್ನಷ್ಟೇ ತೋರಿಸಿದೆ. ಪಾತ್ರಗಳ ಒಳಹೊಕ್ಕು ಅವು ಚರಿತ್ರೆಯ ಘಟನೆಗಳಿಗೆ ಸ್ಪಂದಿಸುವುದನ್ನು ಮತ್ತು ಅವುಗಳ ಮಾನಸಿಕ ತೊಳಲಾಟವನ್ನು ವಿಭಿನ್ನವಾಗಿ ಚಿತ್ರಿಸಿದ್ದಾರೆ".[೩]

ಶರಣ ಚಳುವಳಿ ತನ್ನ ಉದ್ದೇಶ ಕಂಡುಕೊಂಡಿತೇ? ಅಥವಾ ಇಲ್ಲವೇ? ಅದು ವಿಫಲವಾಗಲು ಕಾರಣವೇನು? ಅದರಲ್ಲಿನ ನಾಯಕರ ಮನೋಭಾವ ಏನಾಗಿತ್ತು? ಶರಣ ಸಮುದಾಯದ ನಿಲುವೇನಾಗಿತ್ತು? ಹೀಗೆ ಹತ್ತು ಹಲವಾರು ಅಂಶಗಳು ಈ ನಾಟಕಗಳಲ್ಲಿ ತಲೆದೋರುತ್ತವೆ ಎಂದು ಅಭಿಪ್ರಾಯಪಡುತ್ತಾರೆ.

'ಸಾಹಿತಿ ಸಾಹಿತ್ಯ ವಿಮರ್ಶೆ' ಪಿ.ಲಂಕೇಶರ 'ಮಹಾಚೈತ್ರ' ವಿದ್ಯಾರ್ಥಿಗಳ ಉರುಳು ಎಂಬ ಲೇಖನದಲ್ಲಿ 'ಮಹಾಚೈತ್ರ' ನಾಟಕದ ವಿವಾದದ ಸುತ್ತ ಇರುವ ಪರ, ವಿರೋಧಿ, ತಟಸ್ಥ ಗುಂಪುಗಳನ್ನು ವಿಂಗಡಿಸುತ್ತಾರೆ.

"ವಾಕ್ ಸ್ವಾತಂತ್ರ್ಯಕ್ಕಾಗುತ್ತಿರುವ ಧಕ್ಕೆ, ಸಾಹಿತ್ಯಕ್ಕೆ ಸರ್ಕಾರಗಳಿಂದ ಆಗುತ್ತಿರುವ ಅನ್ಯಾಯ ಇತ್ಯಾದಿಯನ್ನು ಒಪ್ಪಿಕೊಳ್ಳುತ್ತಲೇ 'ಮಹಾಚೈತ್ರ'ದಂಥಹ ಪುಸ್ತಕಗಳನ್ನು ಅಭ್ಯಸಿಸಬೇಕಾದ ವಿದ್ಯಾರ್ಥಿಗಳ ಮತ್ತು ಬೋಧಿಸಬೇಕಾದ ಆಧ್ಯಾಪಕರ ಬಗ್ಗೆ ಸಹಾನುಭೂತಿ ವ್ಯಕ್ತಪಡಿಸುತ್ತೇನೆ. ಈ ನಾಟಕ ಐತಿಹಾಸಿಕವಾಗಿ ದೋಷಗಳಿಂದ ಕೂಡಿದೆ ಎಂಬುದಕ್ಕಾಗಿ ಅಲ್ಲ, ಬಸವಣ್ಣನನ್ನು ಖಂಡಿಸಿದೆ ಎಂಬ ಕಾರಣಕ್ಕಾಗಿ ಅಲ್ಲ, ಲಿಂಗಾಯಿತ ಧರ್ಮಕ್ಕೆ ಅವಮಾನವಾಗಿದೆ ಎಂಬ ಕಾರಣಕ್ಕಾಗಿ ಅಲ್ಲ. ಈತರಹದ್ದೆಲ್ಲಾ ಸಂಕ್ರಾಂತಿ ಮತ್ತು ತಲೆದಂಡ ನಾಟಕಗಳಲ್ಲೇ ಆಗಿರಬಹುದು. ಅವುಗಳಲ್ಲಿ ಒಂದು ನನ್ನ ನಾಟಕವಾದ್ದರಿಂದ ನಾನು ಆ ಬಗ್ಗೆ ಏನನ್ನು ಹೇಳಬಯಸುವುದಿಲ್ಲ. 'ಮಹಾಚೈತ್ರ' ಸಾಹಿತ್ಯ ಕೃತಿಯಾಗಿ ಮತ್ತು ನಾಟಕವಾಗಿ ಕೆಟ್ಟ ಕ್ಷುಲ್ಲಕ ನಾಟಕ ಎಂಬ ಕಾರಣಕ್ಕೆ ವಿದ್ಯಾರ್ಥಿಗಳ ಬಗ್ಗೆ ಅನುಕಂಪ ಇದೆ ಎಂದು ಅಭಿಪ್ರಾಯಪಡುತ್ತಾರೆ".[೪]

'ಸಾಹಿತಿ ಸಾಹಿತ್ಯ ವಿಮರ್ಶೆ' ಈ ಪುಸ್ತಕದ ಮತ್ತೊಂದು ಲೇಖನದಲ್ಲಿ 'ತಲೆದಂಡ ಮತ್ತು ಮಾಸ್ತಿ' ಎಂಬ ಲೇಖನದಲ್ಲಿ ತಲೆದಂಡ ನಾಟಕದಲ್ಲಿನ ಬಸವಣ್ಣ, ಬಿಜ್ಜಳ ರಾಜ, ಮಂತ್ರಿಗಳನ್ನೆಲ್ಲಾ ಬಿಟ್ಟು ಎಲ್ಲ ಮನುಷ್ಯರಂತೆ ಅಗಾಧ ಸಮಸ್ಯೆಗಳ ಎದುರಿಸುವ ದಿಟ್ಟರಂತೆ ಕಂಡುಬರುತ್ತಾರೆ. ಇಲ್ಲಿಯ 'ತಲೆದಂಡ' ವಸ್ತುವಿಗಿಂತಲೂ ಪವಾಡ ಅರ್ಥಪೂರ್ಣವಾಗಿದೆ ಎಂದು ಲಂಕೇಶರು ಅಭಿಪ್ರಾಯಪಡುತ್ತಾರೆ.

"ಅಡ್ಡಪಲ್ಲಕ್ಕಿ ಉತ್ಸವ ಮತ್ತು ದಸರಾ ದರ್ಬಾರು ಪ್ರೊ. ಸಿ.ಎಚ್. ಮರಿದೇವರು ಬರೆದ ಮಹಾಚೈತ್ರವನ್ನು ಕುರಿತು ಬರೆದ ವಿಮರ್ಶಾ ಲೇಖನವು ಬಹಳ ಅತ್ಯಮುಖ್ಯವಾಗಿದೆ. ಆ ಲೇಖನದಲ್ಲಿ ಅಥವಾ ಬರಹದಲ್ಲಿ ಈ ನಾಟಕದ ವಿವಾದಕ್ಕೆ ಕಾರಣಗಳನ್ನು ತಿಳಿಸಿದ್ದಾರೆ. ಹಾಗೆಯೆ ಅದರ ಗುಣ-ದೋಷಗಳನ್ನು ಎತ್ತಿಹಿಡಿದಿದ್ದಾರೆ. ಅವರ ತಪ್ಪು ಗ್ರಹಿಕೆಗಳಿಗೆ ಪರ್ಯಾಯವಾಗಿ ಉತ್ತರವನ್ನು ನೀಡಿದ್ದಾರೆ. ತುಂಬಾ ಮುದ್ದಾದ ಶೀರ್ಷಿಕೆಯೊಂದನ್ನು ಇಟ್ಟು ಬಸವಣ್ಣನಿಗೆ ಅಪಮಾನ ಎಸಗಿದ್ದಾರೆ ಎಂದು ಹೇಳಿದ್ದಾರೆ. ಹಾಗೆಯೇ ಇದೇ ನಾಟಕವನ್ನೇ ವಿಮರ್ಶೆಗೆ ಒಳಪಡಿಸಿದ್ದಾರೆ. ಅಲ್ಲದೇ ಈ ನಾಟಕದಲ್ಲಿ ಏನಿರಬಾರದಿತ್ತು ಎಂಬುದಕ್ಕೆ ಕಾರಣಗಳನ್ನು ಕೊಟ್ಟಿದ್ದಾರೆ ಮತ್ತು ವಿವರಿಸಿದ್ದಾರೆ".[೫]

ಮರಿದೇವರು ಬಸವಣ್ಣನ ಅಕ್ಕ ನೀತಿಗೆಟ್ಟವಳು ಎಂದಿರುವುದು ತಪ್ಪು ಎಂದಿದ್ದಾರೆ. ಅಲ್ಲದೇ ಶಿವಪ್ರಕಾಶರು ಬಸವಣ್ಣನನ್ನು ಸಂದು ಗೊಯ್ಯಲಿನಲ್ಲಿ ಹುಟ್ಟಿದವನು ಎಂದು ಹೇಳಿರುವುದು, ಶೂನ್ಯ ಸಿಂಹಾಸನಾಧೀಶ್ವರ ಅಲ್ಲಮನ ಮೈಯೆಲ್ಲಾ ಕೂರೆ, ನಾರ್ತಾ ಇರೋನು ಎಂದು ಹೇಳಿರುವುದು ತಪ್ಪು ಎಂದು ಅಭಿಪ್ರಾಯಪಡುತ್ತಾರೆ. ಅಲ್ಲದೇ ಬಸವಣ್ಣ ಆತ್ಮಹತ್ಯೆ ಮಾಡಿಕೊಂಡಂತೆ ಚಿತ್ರಿಸಬಾರದಿತ್ತು ಎಂದು ವಿವೇಚನೆಯಿಂದ ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ.

'ರಂಗಾನುಭವದ ಶಿವರಾತ್ರಿ' ಎಂಬ ವಿಜಯ ಕರ್ನಾಟಕ ಪತ್ರಿಕೆಯ ಲೇಖನದಲ್ಲಿ ಈ ರೀತಿಯಾಗಿ ಡಾ.ಎ.ಆರ್.ನಾಗಭೂಷಣರು ಅಭಿಪ್ರಾಯಪಡುತ್ತಾರೆ. "ಶಿವರಾತ್ರಿ ೧೨ನೇಯ ಶತಮಾನದ ಶರಣ ಚಳುವಳಿಯ ಭಿತ್ತಿಯಲ್ಲಿ ಬಸವಣ್ಣ ಬಿಜ್ಜಳರ ಸಂಘರ್ಷವನ್ನು ಪ್ರಕಾಶಿಸುವ ನಾಟಕವಾಗಿದೆ".[೬] ಆದರೆ ಇದು ಇನ್ನೊಂದು ಸ್ತರದಲ್ಲಿ ಅಧಃಪತನಗೊಂಡಿರುವ ಸಮಕಾಲೀನ ಸಾಮಾಜಿಕ, ರಾಜಕೀಯ, ಧಾರ್ಮಿಕ ವಿಷಯಗಳನ್ನು ಅವಲೋಕಿಸುತ್ತದೆ. ಹೀಗೆ ಈ ನಾಟಕ ಸಾರ್ವಕಾಲಿಕತೆ ಮತ್ತು ಸಮಕಾಲಿನತೆ ಎರಡನ್ನು ಏಕಕಾಲಕ್ಕೆ ಸೂಕ್ಷ್ಮವಾಗಿ ಶೋಧಿಸುತ್ತದೆ. ಬಸವಣ್ಣನ ಆದರ್ಶ ಬಿಜ್ಜಳನ ಕ್ಷುದ್ರತೆಗಳ ಮೌಲ್ಯಗಳ ದಯೆ ಪ್ರೀತಿಗಳೊಡನೆ ಮುಖಾಮುಖಿಯಾಗುವುದು ಅತ್ಯಂತ ಅರ್ಥಪೂರ್ಣವಾಗಿದೆ ಎಂದು ಅಭಿಪ್ರಾಯಪಡುತ್ತಾರೆ.

"ಹೊಸಗಾಲದ ತಲ್ಲಣಗಳಿಗೆ ಕಂಬಾರರ ಕನ್ನಡಿ ಎಂಬ ಪ್ರಜಾವಾಣಿ ಸಾಹಿತ್ಯ ಪುರವಣಿಯಲ್ಲಿ ನರಹಳ್ಳಿ ಬಾಲಸುಬ್ರಹ್ಮಣ್ಯರವರು ಶಿವರಾತ್ರಿ ನಾಟಕದ ಕುರಿತು ಮಾತನಾಡಿದ್ದಾರೆ. ಕಂಬಾರರ ಶಿವರಾತ್ರಿ ನಮ್ಮ ಕಾಲದ ಶ್ರೇಷ್ಠ ರಾಜಕೀಯ ನಾಟಕ ನಮ್ಮ ತಲ್ಲಣಗಳಿಗೆ, ಹುಡುಕಾಟಗಳಿಗೆ ಹಿಡಿದ ಕನ್ನಡಿ ಎಂದು ಅಭಿಪ್ರಾಯಪಡುತ್ತಾರೆ".[೭]

ಕಂಬಾರರು ಆಧುನಿಕರಂತೆ ವಿಧ್ವ ಲೋಕವಲ್ಲ. ಅವರದು ಜಾನಪದರಂತೆ ಅಖಂಡ ಜಗತ್ತು. ಅವರ ಜಗತ್ತಿನಲ್ಲಿ ಸ್ವರ್ಗ, ನರಕ ಮುಂತಾದ ೧೪ ಲೋಕಗಳು, ನಂಬಿಕೆಗಳು, ಪವಾಡಗಳು, ಸತ್ಯ, ರಾಜಕೀಯ, ಕೊಲೆ, ಹಾದರ ಎಲ್ಲದಕ್ಕೂ ಸ್ಥಾನ ಇದೆ ಎಂದು ವ್ಯಕ್ತಪಡಿಸುತ್ತಾರೆ.

'ಹೊಸಗನ್ನಡ ಸಾಹಿತ್ಯ ಚರಿತ್ರೆ' ಎಲ್.ಎಸ್.ಶೇಷಗಿರಿರಾವ್ ಅವರ ಪುಸ್ತಕದಲ್ಲಿ ಲಂಕೇಶರ ಸಂಕ್ರಾಂತಿಯ ನಾಟಕವನ್ನು ಕುರಿತು ಈ ರೀತಿಯಾಗಿ ಬರೆದಿದ್ದಾರೆ. "ಹನ್ನೆರಡನೆಯ ಶತಮಾನದ ಬಸವಣ್ಣ–ಬಿಜ್ಜಳರ ಸಮಸ್ಯೆಗಳನ್ನು ಒಂದು ಪ್ರೇಮ ಪ್ರಕರಣದ ಮೂಲಕ ವಿವರಿಸುವ ಈ ನಾಟಕ ಐತಿಹಾಸಿಕವಾಗಿರುವಂತೆಯೇ ಸಮಕಾಲೀನ" ಎಂದಿದ್ದಾರೆ.[೮]

# ಕೊನೆ ಟಿಪ್ಪಣಿಗಳು

೧. **ಮಹಾಮಾರ್ಗ**, ಎಂ.ಎಂ.ಕಲಬುರ್ಗಿಯವರ ಅಭಿನಂದನಾ ಗ್ರಂಥ, ಇದರಲ್ಲಿನ **ಕೆಟ್ಟಿತ್ತು ಕಲ್ಯಾಣ** ನಾಟಕದ ಸಿದ್ಧಲಿಂಗ ಪಟ್ಟಣಶೆಟ್ಟಿ ವಿಮರ್ಶೆ ಲೇಖನ, ಪು.ಸಂ.೮೬೬-೮೬೮

೨. **ಬಸವಣ್ಣನ ವಚನಗಳು: ಸಾಂಸ್ಕೃತಿಕ ಮುಖಾಮುಖಿ**, ೨೦೦೪, ಸಂ: ಅಮರೇಶ ನುಗಡೋಣಿ, **"ಆಧುನಿಕ ಪಠ್ಯಗಳಲ್ಲಿ ಬಸವಣ್ಣನ ಕುರಿತ ಗ್ರಹಿಕೆಗಳು"** ಬಂಜೆಗೆರೆ ಜಯಪ್ರಕಾಶ, ಪು.ಸಂ.೧೨೧

೩. ತ್ರೈಮಾಸಿಕ ಪತ್ರಿಕೆ **'ಸಾಧನೆ'**, ಜನವರಿ, ೨೦೧೩
**"ಮಹಾಚೈತ್ರ ತಲೆದಂಡ ಮತ್ತು ಶಿವರಾತ್ರಿ ನಾಟಕಗಳಲ್ಲಿನ ಬಸವ-ಬಿಜ್ಜಳರ ವಿಭಿನ್ನ ನೆಲೆಗಳು"** ಡಾ.ಮಂಜುನಾಥ ಪಾಳ್ಯ, ಪು.ಸಂ.೫೦

೪. **ಸಾಹಿತಿ ಸಾಹಿತ್ಯ ವಿಮರ್ಶೆ**, ಲೇಖಕರು, ಪಿ.ಲಂಕೇಶ, ಪು.ಸಂ. ೩೪೦, ೩೯೨, ಪ್ರಕಟಣೆ:೨೦೦೮, ಲಂಕೇಶ ಪ್ರಕಾಶನ, ಬೆಂಗಳೂರು.

೫. **ಅಡ್ಡಪಲ್ಲಕ್ಕಿ ಉತ್ಸವ ಮತ್ತು ದಸರಾ ದರ್ಬಾರು**-ಪ್ರೊ. ಸಿ.ಎಚ್.ಮರಿದೇವರು, ಉದಯಬಾನು ಪ್ರಕಾಶನ, ತುಮಕೂರು, ೨೦೧೦, ಪು.ಸಂ. ೧೦೦, ೧೨೦

೬. **ರಂಗಾನುಭವದ ಶಿವರಾತ್ರಿ**-ಡಾ.ಎ.ಆರ್.ನಾಗಭೂಷಣ, ಸಾಪ್ತಾಯಿಕ ಲವಲವಿಕೆ, ವಿಜಯ ಕರ್ನಾಟಕ, ಭಾನುವಾರ, ಏಪ್ರಿಲ್, ೨೦೧೨

೭. **ಹೊಸಗಾಲದ ತಲ್ಲಣಗಳಿಗೆ ಕಂಬಾರರ ಕನ್ನಡಿ**-ನರಹಳ್ಳಿ ಬಾಲಸುಬ್ರಹ್ಮಣ್ಯ, ಸಾಹಿತ್ಯ ಪುರವಣಿ, ಪ್ರಜಾವಾಣಿ, ಭಾನುವಾರ, ಜೂನ್, ೨೦೧೧

೮. **ಹೊಸಗನ್ನಡ ಸಾಹಿತ್ಯ ಚರಿತ್ರೆ**, ಪ್ರೊ.ಎಲ್.ಎಸ್.ಶೇಷಗಿರಿರಾವ್, ಸಪ್ನಬುಕ್ ಹೌಸ್, ಬೆಂಗಳೂರು, ೧೯೭೫, ಪು.ಸಂ.೧೯೩

# ಅಧ್ಯಾಯ-೦೩

## ಬಸವಣ್ಣನ ಕುರಿತ ಆಧುನಿಕ ನಾಟಕಗಳಲ್ಲಿ ಪ್ರಭುತ್ವದ ನೆಲೆಗಳು

ಬಸವಣ್ಣನ ಕುರಿತ ಆಧುನಿಕ ಕನ್ನಡ ನಾಟಕಗಳಲ್ಲಿ ಈ ಅಧ್ಯಾಯದಲ್ಲಿ ಪ್ರಭುತ್ವದ ಅಂಶಗಳನ್ನು ಹುಡುಕುವ ಪ್ರಯತ್ನ ಮಾಡಲಾಗಿದೆ. ನಾನು ಅಧ್ಯಯನಕ್ಕೆ ಒಳಪಡಿಸಿಕೊಂಡ ನಾಟಕಗಳ ವಸ್ತು ೧೨ನೇಯ ಶತಮಾನದಲ್ಲಿ ಕರ್ನಾಟಕದಲ್ಲಿ ಜರುಗಿದ ಶರಣರ ಚಳುವಳಿಗೆ ಸಂಬಂಧಿಸಿದ್ದಾಗಿದೆ. ಪ್ರಭುತ್ವ, ಯಾಜಮಾನ್ಯ ಹಾಗೂ ಅಧಿಕಾರದ ವಿಭಿನ್ನ ಒಂದು ಚಾರಿತ್ರಿಕ ಘಟ್ಟದಲ್ಲಿ ಉಂಟುಮಾಡಿದ ಸಾಮಾಜಿಕ, ರಾಜಕೀಯ, ಧಾರ್ಮಿಕ ಮತ್ತು ಸಾಂಸ್ಕೃತಿಕ ಸಂಘರ್ಷ ಹಾಗೂ ತಲ್ಲಣಗಳನ್ನು ಈ ನಾಟಕಗಳು ಸಮಕಾಲೀನ ನೆಲೆಯಲ್ಲಿ ವಿಶ್ಲೇಷಿಸುತ್ತವೆ. ಪ್ರಭುತ್ವ ಶಕ್ತಿಯ ವಿಭಿನ್ನ ಆಯಾಮಗಳು, ಆಶಯಗಳು ನಿಯಂತ್ರಕ ಶಕ್ತಿ ಮತ್ತು ಅಧಿಕಾರದ ವಿರೋಧ ಇವೇ ಮೊದಲಾದವುಗಳನ್ನು ಈ ನಾಟಕಗಳು ಶೋಧಿಸುತ್ತವೆ. ಅದರ ಜೊತೆಗೆ ಲಿಂಗ, ಜಾತಿ, ಪುರೋಹಿತಶಾಹಿ, ಕುಟುಂಬ, ವಿವಾಹ ಮುಂತಾದ ಅಧಿಕಾರದ ಸಾಂದರ್ಭಿಕ ನೆಲೆಗಳ ಸ್ವರೂಪವನ್ನು ಈ ನಾಟಕಗಳು ಗುರುತಿಸುತ್ತವೆ. ಧಾರ್ಮಿಕ ಮತ್ತು ರಾಜಕೀಯ ವಿಪ್ಲವಗಳು, ಸಾಂಸ್ಕೃತಿಕ ಪಲ್ಲಟಗಳು, ಕ್ರಾಂತಿಯ ಸೋಲು ಇವುಗಳ ಪರಿಶೀಲನೆ ಈ ನಾಟಕಗಳ ಮುಖ್ಯ ಕೇಂದ್ರವಾಗಿದೆ.

ಅರಮನೆ ಮತ್ತು ಮಹಾಮನೆ, ಪುರೋಹಿತಶಾಹಿಯ ಕುಟಿಲೋಪಾಯಗಳು, ವ್ಯಕ್ತಿ-ತತ್ವ, ವ್ಯಕ್ತಿ-ಶಕ್ತಿ, ಸ್ಥಾವರ-ಜಂಗಮಗಳ ಮುಖಾಮುಖಿ ಇವೇ ಮೊದಲಾದ ದ್ವಂದ್ವ ಬಿಕ್ಕಟ್ಟುಗಳನ್ನು ಈ ಕೃತಿಗಳು ಪರಿಶೀಲಿಸುತ್ತವೆ. ಗಿರೀಶ್ ಕಾರ್ನಾಡರವರ ಅಭಿಪ್ರಾಯದಂತೆ "ನೋಯುವ ಹಲ್ಲಿಗೆ ನಾಲಿಗೆ ಮತ್ತೆ ಮತ್ತೆ ಹೊರಳುವಂತೆ" ಬೇರೆ-ಬೇರೆ ನೆಲೆಗಳಲ್ಲಿ ಈ ಪರಿಕಲ್ಪನೆಯನ್ನು ನೋಡಿರುವುದನ್ನು ಈ ಅಧ್ಯಯನ ಚರ್ಚಿಸುತ್ತದೆ.

"ಆಧುನಿಕ ಕಾಲದ ಚಿಂತಕರು ವಚನಕಾರ ಬಸವಣ್ಣನನ್ನು ಕಥಾನಕಗಳ ಬಸವಣ್ಣನನ್ನು ಯಾವ-ಯಾವ ಸಂದರ್ಭದಲ್ಲಿ, ಯಾವ-ಯಾವ ಅರ್ಥದಲ್ಲಿ ಬೇರೆ-ಬೇರೆ ಮಾಡಿ ನೋಡುತ್ತಾರೋ, ಒಂದರೊಳಗೊಂದು ಸೇರಿಸಿ ನೋಡುತ್ತಾರೋ ಎಂಬುದು ತಿಳಿಯುವುದಿಲ್ಲ ಎಂದು ಅಮರೇಶ್ ನುಗಡೋಣಿಯವರು ಹೇಳುವ ಮಾತು ಸತ್ಯವೇ ಆಗಿದೆ".[೧]

ಅಧ್ಯಯನಕ್ಕೆ ತೆಗೆದುಕೊಂಡ ನಾಟಕಗಳು ಹೆಣ್ಣು-ಗಂಡಿನ ಸಂಬಂಧ ಹಾಗೂ ಬಿಕ್ಕಟ್ಟು, ಅದರಲ್ಲೂ ಅಂತರ್ ಜಾತಿಯ ವಿವಾಹ, ಜಾತಿಯ ಯಜಮಾನ್ಯವನ್ನು ಅಲುಗಾಡಿಸಿದ ಸಂಧರ್ಭ ಮಹಾ ಸಂಘರ್ಷವನ್ನು ವಿಶ್ಲೇಷಿಸುವ ಕಥಾನಕಗಳಾಗಿವೆ. ಮದುವೆಯಂಥ ಒಂದು ಸಂಸ್ಥೆಗೆ ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ಹಾಗೂ ಜಾತಿ ಸಂಬಂಧಿತ ರಾಜಕಾರಣಗಳು ಸೇರ್ಪಡೆಗೊಂಡು, ಬಿಕ್ಕಟ್ಟು ಉಂಟಾಗುವುದನ್ನು ಈ ನಾಟಕಗಳು ವಿಶ್ಲೇಷಿಸುತ್ತವೆ. ಧರ್ಮದ ಕಲ್ಪನೆ, ಪ್ರೇಮದ ಕಲ್ಪನೆ ಹಾಗೂ ಭಾವದ ಕಲ್ಪನೆಗಳ ನಡುವಿನ ಬಿಕ್ಕಟ್ಟುಗಳು ಜಾತಿ ಮತ್ತು ಲಿಂಗರಾಜಕಾರಣಕ್ಕೆ ಕಾರಣವಾಗುತ್ತದೆ ಎಂಬುದು 'ಸಂಕ್ರಾಂತಿ' ನಾಟಕದ ವಸ್ತು ಎಂದು ಲಂಕೇಶರೇ ಹೀಗೆ ಹೇಳಿಕೊಂಡಿದ್ದಾರೆ. "ಒಂದು ಬದಲಾಗುತ್ತಿರುವ ಸಮಾಜದಲ್ಲಿ Transitional Period ನಲ್ಲಿ ನಿಮ್ಮ ಧರ್ಮದ ಕಲ್ಪನೆ ಮತ್ತು ಪ್ರೇಮದ ಕಲ್ಪನೆ ಹಾಗೆ ಭಾವವೂ ಕೂಡ ಬದಲಾವಣೆಯನ್ನು ಪಡೆಯದೇ ಇದ್ದರೆ ಒಂದು ದುರಂತಕ್ಕೆ ಎಡೆಮಾಡಿಕೊಡುತ್ತೆ ಅಂತ. ಅದು ಬಸವಣ್ಣನ ಬಗ್ಗೆಯೂ ಅಲ್ಲ, ಬಿಜ್ಜಳನ ಬಗ್ಗೆಯೂ ಅಲ್ಲ, ನೀವು ಪ್ರೇಮ ಮಾಡುವುದು ಕೂಡ ನಿಮ್ಮ ಜಾತಿಯ ಅಹಂಕಾರದಿಂದ ಇರಬಹುದು. ಧರ್ಮದ ಅಹಂಕಾರದಿಂದ ಇರಬಹುದು. ನೀವು ಧರ್ಮವನ್ನು

ಒಪ್ಪೋದು ಕೂಡಾ ಇನ್ನಾವುದೋ ಒಂದು ನೆಪದಲ್ಲಿ ಇರುವುದು ಎನ್ನುವಂತ ಒಂದು ವಿಷಯವನ್ನು ನಾನು ಅಲ್ಲಿಟ್ಟಿದ್ದೇನೆ".[೨]

ಹೆಣ್ಣು ಗಂಡಿನ ಸಂಬಂಧವು ರೂಢಿಯಲ್ಲಿನ ಜಾತಿವ್ಯವಸ್ಥೆಯ ಕೌರ್ಯವನ್ನು ಮಾತ್ರ ಹೇಳದೇ, ಪ್ರಕೃತಿ ಧರ್ಮ, ಕಾಮ ಪ್ರೇಮಗಳ ವಾಂಛೆಯಾಗಿಯೂ 'ಸಂಕ್ರಾಂತಿ'ಯಲ್ಲಿ ನಿರೂಪಿತವಾಗಿದೆ. ಅಂತರ್ ಜಾತಿ ವಿವಾಹವನ್ನು ಆದರ್ಶಕೃತ ಮೌಲ್ಯವಾಗಿ ಬಸವಣ್ಣ ಗ್ರಹಿಸಿದಂತೆ ಕಂಡುಬಂದರೂ, ಜಾತಿಗಳ ಪ್ರಾಬಲ್ಯವನ್ನು ಒಡೆಯುವುದಕ್ಕೆ ಅಂತರ್ ಜಾತೀಯವಿವಾಹಗಳು ಒಂದು ಪ್ರೇರಕ ಶಕ್ತಿಯಾಗಬಲ್ಲವು ಎನ್ನುವ ಕ್ರಾಂತಿಯ ಆಶಯವು ಇಲ್ಲಿ ಮುಖ್ಯವಾಗಿದೆ. "ಗಂಡು ಹೆಣ್ಣಿನ ಆಕರ್ಷಣೆಯ ನೆಲೆಯಲ್ಲಿ ಬರೀ ಪ್ರೇಮದ ಆದರ್ಶೀಕರಣ ಮಾತ್ರವಲ್ಲ. ಲಿಂಗಸಂಬಂಧವನ್ನು ಹೆಚ್ಚು ತೀವ್ರಗೊಳಿಸುವ, ಬಲಗೊಳಿಸುವ ನೆಲೆಗೊಳಿಸುವ ಕಾಮಭಾವದ ಸೂಕ್ಷ್ಮತೆಗಳ ಚಿತ್ರಣವಿದೆ" ಎಂದು ಎಸ್.ಜಿ.ಸಿದ್ಧರಾಮಯ್ಯನವರು ಅಭಿಪ್ರಾಯಪಡುತ್ತಾರೆ.

ಅದೇ ರೀತಿ ಅಂತರ್ ಜಾತೀಯ ವಿವಾಹ ಸಂಬಂಧದ ಮೂಲಕ ಜಾತಿ ವ್ಯವಸ್ಥೆಯ ಯಜಮಾನ್ಯಕ್ಕೆ ಪ್ರತಿರೋಧ ವ್ಯಕ್ತಪಡಿಸುವ ಪ್ರಯತ್ನವೂ ಇಲ್ಲಿದೆ. ನಾಟಕದಲ್ಲಿನ ಉಷಾ-ರುದ್ರರ ಪ್ರೇಮ-ಕಾಮದ ಪ್ರಕರಣವು ರಾಜಪ್ರಭುತ್ವ, ಪುರೋಹಿತಶಾಹಿಯ ಯಜಮಾನ್ಯ ಹಾಗೂ ಸುಧಾರಣಾವಾದಿ ಬಸವಣ್ಣ ನೆಲೆಗೊಳಿಸಿರುವ ಶರಣ ಧಾರ್ಮಿಕ ಪ್ರಭುತ್ವದ ನಡುವಿನ ಸಂಘರ್ಷಗಳಿಗೆ ಒಂದು ಸ್ಪರ್ಧಾ ಕಣವನ್ನು ನಿರ್ಮಿಸಿಬಿಡುತ್ತದೆ. ಉಷಾ-ರುದ್ರರ ಪ್ರೇಮ ಮತ್ತು ರುದ್ರನ ಶರಣತತ್ವವು ಒಂದು ಸ್ಪಷ್ಟ ರೂಪ ಪಡೆಯುತ್ತಿದ್ದಂತೆಯೇ ದ್ವೇಷಕ್ಕೆ-ಕಾಮಕ್ಕೆ ತಿರುಗಿಬಿಡುತ್ತದೆ. ರುದ್ರ ಬ್ರಾಹ್ಮಣೀಕರಣಕ್ಕೂ, ಉಷಾ ಶೂದ್ರಿಕರಣಕ್ಕೂ ಪಲ್ಲಟಗೊಳ್ಳುವ ಸಂಕ್ರಮಣ ಸ್ಥಿತಿ ಏರ್ಪಡುತ್ತದೆ. ರುದ್ರನನ್ನು ಕೆಣಕಿ ರುದ್ರತ್ವವನ್ನು ಜಾಗೃತಗೊಳಿಸುವಲ್ಲಿ ಇಡೀ ಶೂದ್ರ ಶಕ್ತಿಯ ಚೈತನ್ಯ ಅಡಗಿದೆ ಎಂಬ ಧ್ವನಿ ಉಷಾಳ ಮಾತುಗಳಲ್ಲಿ ವ್ಯಕ್ತವಾಗುತ್ತದೆ. ಉಷಾ ಶೂದ್ರತ್ವದಲ್ಲಿ ತನ್ನನ್ನು ಗುರುತಿಸಿಕೊಂಡರೂ ಪುರೋಹಿತನಾಗಿ ಯಜಮಾನ್ಯ ಹಾಗೂ ಪ್ರಭುತ್ವದ ಹಿತಾಶಕ್ತಿಯನ್ನೇ ಎತ್ತಿಹಿಡಿಯುವಂತಾದುದು. ಈ ನಾಟಕದ ದುರಂತ ವ್ಯಂಗ್ಯವಾಗಿದೆ.

'ತಲೆದಂಡ'ದಲ್ಲಿ ಹೆಣ್ಣು ಗಂಡಿನ ಸಂಬಂಧ ಪ್ರೇಮ-ಕಾಮದ ಸಂಬಂಧವಾಗಿರದೇ, ಹಿರಿಯರ ಪ್ರತಿಷ್ಠೆ, ಹುಚ್ಚುತನ, ಹಠಮಾರಿತನಗಳಿಂದಾಗಿ ಬಿಕ್ಕಟ್ಟುಗಳಿಗೆ ಕಾರಣವಾಗುತ್ತದೆ. ಸಂಕ್ರಾಂತಿಯಲ್ಲಿ ಲಿಂಗಸಂಬಂಧಗಳ ಬಿಕ್ಕಟ್ಟು ಕ್ರಾಂತಿಯ ರೂಪವನ್ನು ಪಡೆಯುತ್ತದೆ. ಆದರೆ ತಲೆದಂಡದಲ್ಲಿ ವಿವಾಹದ ಸಂಬಂಧವನ್ನು ವೈದಿಕರು ಮತ್ತು ಸೋವಿದೇವ ತಮ್ಮ ಬಂಡಾಯದ ಸ್ಫೋಟಕ ಶಕ್ತಿಯಾಗಿ ಬಳಸಿಕೊಳ್ಳುತ್ತಾರೆ. ಬಸವಣ್ಣ ಕಾಲಜ್ಞಾನವನ್ನು ತಿಳಿದವನು. ಅಂದರೆ ತನ್ನ ಕ್ರಾಂತಿಯ ಮಿತಿಯನ್ನು ಅರಿತವನು. ಕಲಾವತಿಶೀಲರ ಮದುವೆಯ ವರ್ಣಸಂಕರದ ಭೀಕರ ಪರಿಣಾಮದ ಬಗ್ಗೆ ಸೂಕ್ಷ್ಮ ಮುನ್ನೋಟ ಬಸವ-ಬಿಜ್ಜಳರಿಗೂ ಇದೆ. ಈ ಮದುವೆ ನಡೆದರೂ ಅಥವಾ ನಿಂತರೂ ಅದರ ಪರಿಣಾಮ ಪ್ರಭುತ್ವದ ಮೇಲೆಯೇ 'ಇದು ಬರೇ ಲಗ್ನವಲ್ಲ, ಇದು ಕ್ರಾಂತಿ. ಸಾವಿರಾರು ವರುಷದಿಂದ ಬೇರೂರಿ ಬೆಳೆದು ನಿಂತ ವ್ಯವಸ್ಥೆಯನ್ನು ನಿರ್ಮೂಲನಗೊಳಿಸಲಿಕ್ಕೆ ನಮ್ಮ ದುಡಿಮೆ ಸಾಲದು-ಅಂತ ನನಗೆ ಅನಿಸುತ್ತದೆ ಎಂದು ಬಿಜ್ಜಳ ತನ್ನ ಆತಂಕವನ್ನು ವ್ಯಕ್ತಪಡಿಸುತ್ತಾನೆ. ಈ ಬಗೆಯ ವಿವಾಹಕ್ಕೆ ಬಸವಣ್ಣನ ಸಂಪೂರ್ಣ ಸಮ್ಮತಿಯೇ ಇಲ್ಲ . ಏಕೆಂದರೆ ಕಾಲ ಪಕ್ವವಾಗಿಲ್ಲ ಎಂಬುದು ಆತನ ಗ್ರಹಿಕೆ. ಆದರೂ ಬಿಜ್ಜಳ ಈ ಮದುವೆಗೆ ರಕ್ಷಣೆ ಕೊಡಲು ಮುಂದಾಗುತ್ತಾನೆ. ಆದರೆ ಆ ರಕ್ಷಣೆಯಲ್ಲೂ ಪ್ರಭುತ್ವದ ಸ್ವಾರ್ಥ ಅಡಗಿದೆ. ಬಸವ-ಬಿಜ್ಜಳರ ವಿರುದ್ಧ ಅಂದರೆ ಶರಣ ಧಾರ್ಮಿಕ ಪ್ರಭುತ್ವ ಹಾಗೂ ರಾಜಪ್ರಭುತ್ವದ ವಿರುದ್ಧ

ಬ್ರಾಹ್ಮಣಶಾಹಿ ಪಿತೂರಿ ನಡೆಸುತ್ತದೆ. ಬಿಜ್ಜಳ ದ್ವಂದ್ವಕ್ಕೆ, ಬಿಕ್ಕಟ್ಟಿಗೆ ಒಳಗಾಗುತ್ತಾನೆ. ಸೋವಿದೇವನ ಮೂಲಕ ರಾಜಕೀಯ ಪಿತೂರಿ ನಡೆದು ಸಾಮಾಜಿಕ ಹಾಗೂ ರಾಜಕೀಯ ಕೋಲಾಹಲ ಉಂಟಾಗುತ್ತದೆ. ಕಡೆಗೆ ಅಂತರ್ ಜಾತೀಯ ವಿವಾಹದ ಬಿಕ್ಕಟ್ಟಿಗೆ ಬಿಜ್ಜಳ ತನ್ನ ಅಧಿಕಾರ ಹಾಗೂ ತಲೆಯನ್ನು ಅರ್ಪಿಸಬೇಕಾಗಿ ಬಂದುದು ಇತಿಹಾಸದ ವ್ಯಂಗ್ಯ. ಜಾತಿವ್ಯವಸ್ಥೆಯ ಧಮನಕಾರಿ ಯಜಮಾನ್ಯದಿಂದಾಗಿ ಪ್ರಭುತ್ವವೇ ಸೋಲನ್ನೊಪ್ಪಬೇಕಾದ ಸ್ಥಿತಿಯನ್ನು ನಾಟಕ ವರ್ಣಿಸುತ್ತದೆ.

'ಮಹಾಚೈತ್ರ' ನಾಟಕದಲ್ಲಿ ವರ್ಣಸಂಕರದಿಂದಾದ ವಿವಾಹ ಹಾಗೂ ಗಂಡು ಹಣ್ಣಿನ ಸಂಬಂಧ ಭೀಕರ ಹಿಂಸೆಯಲ್ಲಿ ಅಂತ್ಯಗೊಳ್ಳುವುದನ್ನು ನೋಡಬಹುದಾಗಿದೆ. ಶೀಲವಂತ ಮತ್ತು ಮಾಧವಿಯರ ಮದುವೆಯನ್ನು ಬಸವಣ್ಣನವರೇ ನಿಂತು ಮಾಡಿಸುತ್ತಾರೆ. ಇದರ ವಿರುದ್ಧ ವೈದಿಕ ಪಿತೂರಿ ನಡೆಯುತ್ತದೆ. ಇಲ್ಲಿಯ ಅಂತರ್ ಜಾತೀಯ ಪ್ರೇಮ ವಿವಾಹವು ಧರ್ಮ ಮತ್ತು ರಾಜಕೀಯ ಶಕ್ತಿಗಳ ಕ್ರೌರ್ಯಕ್ಕೆ ಸಿಕ್ಕಿ ರಕ್ತಪಾತ ಹಿಂಸೆಗೆ ಕಾರಣವಾಗುತ್ತದೆ. ಈ ಪ್ರೇಮ ಪ್ರಕರಣ ಬಿಜ್ಜಳನ ಕೊಲೆಗೂ ಕಾರಣವಾಗುತ್ತದೆ. ಆದರೆ ಗಂಡು-ಹೆಣ್ಣಿನ ನಡುವಿನ ಮುಕ್ತ ಪ್ರೇಮ ಮಾತ್ರ ಶಾಶ್ವತವಾದುದು ಎಂಬ ಆಶಯವಿದೆ.

ಇದು ಬದುಕಿನ ವಿಕಾಸಶೀಲ ಕ್ರಿಯೆ ಎಂಬುದು ನಾಟಕದ ಮುಖ್ಯ ನಿಲುವಾಗಿದೆ. ಇದು ಕೆಲವೊಮ್ಮೆ ಜಾತಿವ್ಯವಸ್ಥೆಯ ಅಡ್ಡಿ ಅತಂಕಗಳನ್ನು ಮೀರಿದ ಶುದ್ಧ ಪ್ರೀತಿಯಾಗಿ ತೋರುತ್ತದೆ. ಸಮಾಜವನ್ನು ದೃಢ ವಿಶ್ವಾಸದಿಂದ ಎದುರಿಸಲು ಸಿದ್ಧವಾಗಿರುವ ಯುವಜನಾಂಗದ ಬಗೆಗಿನ ಆಶಾಭಾವ ಈ ನಾಟಕದಲ್ಲಿ ವ್ಯಕ್ತವಾಗಿದೆ. ಆದರೂ ತುಂಬಾ ಸೂಕ್ಷ್ಮವಾದ ಆದರೆ ಸ್ಫೋಟಕವಾದ ಬೆಳವಣಿಗೆಯೊಂದು ಆರಂಭಗೊಳ್ಳುತ್ತಿರುವಾಗಲೇ ಸಂಪ್ರದಾಯಿಕ ಸಮಾಜ ಮತ್ತು ಪುರೋಹಿತಶಾಹಿ ಯಜಮಾನ್ಯ ಅದರ ಬೆಳವಣಿಗೆಯನ್ನು ನಿಗ್ರಹಿಸಲು ಮುಂದಾದ ರೀತಿ ಈ ನಾಲ್ಕು ನಾಟಕಗಳಲ್ಲೂ ಮುಖ್ಯ ಕ್ರಿಯೆಯಾಗಿ ಬಂದಿದೆ.

"ಧರ್ಮ ಎಂಬುದು ವಿಶ್ವವನ್ನು ಆಳುವ ಶಕ್ತಿಯಾಗಿ ಒಂದೆಡೆ ಅರ್ಥ ಪಡೆದಿದ್ದರೆ, ವ್ಯಕ್ತಿ ಮತ್ತು ಸಮೂಹದ ಸಂದರ್ಭದ ಆಚರಣೆಗೆ ಸಂಬಂಧಿಸಿದ್ದಾಗಿದೆ. ಅಲ್ಲದೇ ನಿರ್ದಿಷ್ಟ ಅರ್ಥದಲ್ಲಿ, ನಿರ್ದಿಷ್ಟ ಸಂದರ್ಭದಲ್ಲಿ ರಾಜಧರ್ಮ, ಜಾತಿಧರ್ಮ, ಶ್ರೇಣೀಕರಣ ಮುಂತಾಗಿ ಆಚಾರ ಭೇದಗಳನ್ನು ಸೂಚಿಸುತ್ತದೆ. ಧಾರ್ಮಿಕತೆ ಒಂದು ರಾಜಕೀಯ ಅಸ್ತ್ರವು ಆಗಿ ನಾಟಕಗಳಲ್ಲಿ ಬಳಕೆಯಾಗಿದೆ. ಇದು ರಾಜ ಪ್ರಭುತ್ವದ ಬೇರೆ-ಬೇರೆ ಕಾಲದಲ್ಲಿ, ಬೇರೆ-ಬೇರೆ ಸಂದರ್ಭಗಳಲ್ಲಿ, ಸ್ವಮತ ಮಂಡನೆ, ಪರಮತ ಖಂಡನೆ ಮೊದಲಾದ ವೈವಿಧ್ಯಪೂರ್ಣವಾದ ಪೈಪೋಟಿಗಳನ್ನು ನಡೆಸುತ್ತಾ, ಅಸ್ತಿತ್ವ ಪಡೆದುಕೊಳ್ಳುತ್ತಾ ಬಂದಿದೆ. ರಾಜ ಪ್ರಭುತ್ವದ ಸಂದರ್ಭದಲ್ಲಿ ಧರ್ಮ ಎನ್ನುವುದು ಪ್ರಭುತ್ವದ ಮುಖ್ಯ ನೆಲೆಯಾಗಿಯೇ ಕೆಲಸಮಾಡಿದೆ. ಅದೇ ಪ್ರಭುತ್ವಕ್ಕೆ ಮಾನ್ಯತೆ ಸೃಷ್ಟಿಸಿದ ಈ ಪ್ರಭುತ್ವವನ್ನು ರಚಿಸುವ ರಾಜತ್ವದ ಅಲೌಕಿಕ ಸಂಬಂಧಗಳನ್ನು ಮಾನ್ಯ ಮಾಡುವ ಯಜಮಾನ್ಯ ಶಕ್ತಿಯಾಗಿಯೇ ಕಾಣಿಸಿಕೊಳ್ಳುತ್ತಾ ಬಂದಿದೆ. ಒಟ್ಟಿನಲ್ಲಿ ಧಾರ್ಮಿಕ ಪ್ರಭುತ್ವವು ಒಂದು ಪ್ರಾಪಂಚಿಕ ವ್ಯವಸ್ಥೆಯನ್ನು ಗಟ್ಟಿಮಾಡುವ ರಾಜಪ್ರಭುತ್ವವನ್ನು ನಿರ್ವಹಿಸುವ ಹಾಗೂ ನಿರ್ಬಂಧಿಸುವ ಶಕ್ತಿಕೇಂದ್ರವಾಗಿ ಅಸ್ತಿತ್ವ ಸ್ಥಾಪಿಸಿದೆ ಎಂಬುದನ್ನು ಈ ನಾಟಕಗಳು ಗ್ರಹಿಸುತ್ತವೆ".[೩]

೧೨ನೇಯ ಶತಮಾನದಲ್ಲಿ ಪ್ರಭುತ್ವವು ಬ್ರಾಹ್ಮಣ ಮತ್ತು ಶರಣ ಈ ಎರಡು ವರ್ಗಗಳನ್ನು ಅವಲಂಬಿಸಿತ್ತು. ವೈದಿಕರು ವ್ಯವಸ್ಥೆಯ ಅತ್ಯುನ್ನತ ಸ್ಥಾನದಲ್ಲಿ ರಾಜ್ಯದ ಗೌರವ ಆದರಗಳಿಗೆ ಪಾತ್ರರಾಗಿದ್ದರು. ಈ ವ್ಯವಸ್ಥೆಯನ್ನು ಧಿಕ್ಕರಿಸಿ, ಅದರಿಂದ ಹೊರಗೆ ಬಂದು ಪ್ರಾದೇಶಿಕ ವ್ಯವಸ್ಥೆಯೊಂದರಲ್ಲಿ ಬದುಕುವ ಸಮುದಾಯದ ಗೌರವ ಆದರಗಳಿಗೆ ಪಾತ್ರರಾಗಿದ್ದವರು ಶರಣರು. ಈಎರಡು ವರ್ಗಗಳು

ವ್ಯವಸ್ಥೆಯನ್ನು ಕಟ್ಟುವ ಹಾಗೂ ಕೆಡಹುವ ಶಕ್ತಿಗಳಾಗಿ ನಿರ್ಣಾಯಕ ಪಾತ್ರ ವಹಿಸಿದ್ದವು. 'ವರ್ಣ' ಧರ್ಮವು ಒಂದು ಸಮಾಜದ ನಿರ್ವಹಣಾ ಶಕ್ತಿಯಾಗಿ ಕಾರ್ಯ ನಿರ್ವಹಿಸುತ್ತಿತ್ತು. ಅಲ್ಲದೇ ರಾಜನನ್ನು ಅತಿಮಾನುಷ ಶಕ್ತಿಯಾಗಿ ಪರಿವರ್ತಿಸಬಲ್ಲೆನೆಂಬ ಪ್ರಭಾವವನ್ನು ಅದು ಹೊಂದಿತ್ತು. "ಪ್ರಭುತ್ವ ಅಥವಾ ರಾಜಮನೆತನಗಳು ವೈದಿಕರಿಗೆ ಮಠ, ದೇವಸ್ಥಾನಗಳನ್ನು ನಿರ್ಮಿಸಿಕೊಟ್ಟು, ಅಗ್ರಹಾರಗಳನ್ನು ದಾನವಾಗಿ ನೀಡಿ, ಅವರನ್ನು ರಾಜ್ಯದ ಮೂಲೆ-ಮೂಲೆಗಳಲ್ಲಿ ನೆಲೆನಿಲ್ಲಿಸಿದವು. ೧೨ನೇ ಶತಮಾನದ ಉತ್ತರಾರ್ಧದಲ್ಲಿ ಚಾಲುಕ್ಯ ಚಕ್ರವರ್ತಿಗಳ ಸ್ಥಾನವನ್ನು ಬಿಜ್ಜಳನು ಆಕ್ರಮಿಸಿಕೊಂಡಿದ್ದು, ತನ್ನ ಪ್ರದೇಶದಲ್ಲಿ ಮಾತ್ರ ದೇವಾಲಯಗಳಿಗೆ ಹಿಂದೆ ಯಾವ ರಾಜನೂ ನೀಡಿರದಿದ್ದಷ್ಟು ದಾನವನ್ನು ನೀಡಿದನು ಎಂದು ಉಲ್ಲೇಖಗಳಿವೆ. ಆ ಮೂಲಕ ತನ್ನ ಆಳ್ವಿಕೆಗೆ ಮಾನ್ಯತೆ ಸಂಪಾದಿಸುವುದು ಪ್ರಭುತ್ವದ ಉದ್ದೇಶವಿದ್ದಂತೆ ತೋರುತ್ತದೆ. ಈ ರೀತಿ ವೈದಿಕತೆಯನ್ನು ಪೋಷಿಸುವ, ನೆಲೆನಿಲ್ಲಿಸುವ ಕಾರ್ಯವನ್ನು ತಮ್ಮ ಅಧಿಕಾರ ನಿರ್ಮಾಣ ಹಾಗೂ ಸ್ಥಿರೀಕರಣಕ್ಕೆ ಅನಿವಾರ್ಯವೆಂದು ಪ್ರಭುತ್ವವು ಅರಿತುಕೊಂಡಂತೆ ಕಾಣುತ್ತದೆ. ಇದರಿಂದ ವೈದಿಕ ಧರ್ಮವು ಪ್ರಭುತ್ವಕ್ಕೆ ಅನುಕೂಲವಾದ ಲೋಕದೃಷ್ಟಿಯನ್ನು ಬೆಳೆಸಿ ಮಾನ್ಯತೆಯನ್ನು ಸೃಷ್ಟಿಸುವ ಮಠ, ದೇವಸ್ಥಾನ, ಅಗ್ರಹಾರಗಳು ಮುಂತಾದ ಪರಿಣಾಮಕಾರಿಯಾದ ಅಧಿಕಾರ ಕೇಂದ್ರವನ್ನು ರೂಪಿಸಿತು.

ಜಾತಿವ್ಯವಸ್ಥೆಯನ್ನು ಧಿಕ್ಕರಿಸಿ ಅಧಿಕಾರ ರಚನೆಯ ಮಾನದಂಡಗಳನ್ನೇ ಉಪೇಕ್ಷಿಸಿದ ಶರಣರು ರಾಜಪ್ರಭುತ್ವ ಮತ್ತು ವೈದಿಕರೊಂದಿಗೆ ಪೈಪೋಟಿ ನಡೆಸಿ, ಕೆಲವೊಮ್ಮೆ ಮೇಲುಗೈ ಸಾಧಿಸಿದ್ದನ್ನು ೧೨ನೇಯ ಶತಮಾನದ ಶರಣ ಚಳುವಳಿಯಲ್ಲಿ ಕಾಣುತ್ತೇವೆ. ಈ ರೀತಿ ವರ್ಣಧರ್ಮಕ್ಕೆ ಹೊರತಾದ ಅದನ್ನು ಸದಾ ಪ್ರಶ್ನಿಸುವ ಹಾಗೂ ಪರ್ಯಾಯವಾದ ಧರ್ಮಕಲ್ಪನೆಯನ್ನು ಪ್ರತಿಪಾದಿಸುವ ಪ್ರಕ್ರಿಯೆ ಶರಣ ಚಳುವಳಿಯ ಸಂದರ್ಭದಲ್ಲಿ ಜಾಗೃತವಾಗಿತ್ತು. ಶರಣರು ಜನಸಮುದಾಯದ ಪ್ರತಿನಿಧಿಗಳಾಗಿ, ಪರ್ಯಾಯ ಸಾಧ್ಯತೆಯಾಗಿ ವ್ಯವಸ್ಥೆಗೆ ಮುಖಾಮುಖಿಯಾದರು. 'ಸಂಕ್ರಾಂತಿ' ನಾಟಕದಲ್ಲಿ ಪ್ರಭುತ್ವ ಪೋಷಿತ ವ್ಯವಸ್ಥೆಯನ್ನು ಸಂಕೀರ್ಣ ನೆಲೆಯಲ್ಲಿ ಬಸವಣ್ಣ ಪ್ರಶ್ನಿಸುತ್ತಾರೆ. "ಈ ವ್ಯವಸ್ಥೆಯನ್ನು ಕಾಪಾಡುವುದರಲ್ಲಿ ನಿಮ್ಮ ಆಸಕ್ತಿ ಅದರಲ್ಲಿ ನಿಮ್ಮ ಸುಖ ಕೂಡ ಅಡಗಿದೆಯೆಂದು ನಿಮಗೆ ಗೊತ್ತು. ಆದ್ದರಿಂದ ಭಟ್ಟರಂಥವರಿಂದ ಕತೆಹೇಳಿಸುತ್ತೀರಿ! ಎಲ್ಲರಿಗೆ ಬಯ ಹರಡುತ್ತಿರಿ" ಹೀಗೆ ಪ್ರಭುತ್ವದ ಮುಖಗಳ ಹಲವಾರು ಉದಾಹರಣೆಗಳು 'ಸಂಕ್ರಾಂತಿ'ಯಲ್ಲಿ ಸಿಗುತ್ತದೆ.

ರಾಜಪ್ರಭುತ್ವವು ಅದೇ ರೀತಿ ತನ್ನ ಯಾಜಮಾನ್ಯವನ್ನು ಗಟ್ಟಿಗೊಳಿಸಿಕೊಳ್ಳುವ ಒಂದು ರೂಪವೆಂದರೆ ಬ್ರಾಹ್ಮಕ ಕಲ್ಪನೆಗಳನ್ನು ಮುಂದಿಡುವುದು, ಸಮಾಜದ ನಿಯಂತ್ರಣಕ್ಕೆ ಮೂಢನಂಬಿಕೆಯ ಪ್ರಮೇಯಗಳನ್ನು ಸೃಷ್ಟಿಸುವುದು. ಅಗೋಚರ ವಸ್ತುವಿನ ಬಗೆಗೆ ಭಯವನ್ನು ಹುಟ್ಟಿಸುವುದು. ಅಲೌಕಿಕ ಧಾರ್ಮಿಕ ಕ್ರಿಯೆಗಳನ್ನು ನಿರೂಪಿಸುವುದು ಅಥವಾ ಅಂತಹುದೇ ಯಾವುದಾದರೂ ಬೇರೆ-ಬೇರೆ ಹಕ್ಕಿನ ಮಾರ್ಗಗಳಿಂದ ರಾಜಪ್ರಭುತ್ವವು ಸಮುದಾಯವನ್ನು ತನ್ನ ನಿಯಂತ್ರಣದಲ್ಲಿಟ್ಟುಕೊಳ್ಳುವ ಪ್ರಯತ್ನ ಮಾಡುತ್ತದೆ. ಒಟ್ಟಿನಲ್ಲಿ ಧರ್ಮ ಮತ್ತು ರಾಜಕೀಯ ಶಕ್ತಿಗಳು ಯಾವುದೇ ಕಾಲದಲ್ಲಾದರೂ ಸಮಾಜವನ್ನು ನಿಯಂತ್ರಿಸಬಲ್ಲ ಪ್ರಬಲ ಅಧಿಕಾರ ಕೇಂದ್ರಗಳಾಗಿದ್ದವು. ಆದರೆ ಚಾರಿತ್ರಿಕ ಸಂದರ್ಭದಲ್ಲಿ ವೈದಿಕರು ತಮ್ಮ ವರ್ಣಧರ್ಮದ ಅನುಷ್ಠಾನಕ್ಕಾಗಿ ಮಠ ವ್ಯವಸ್ಥೆಯನ್ನು ಅಳವಡಿಸಿಕೊಂಡಂತೆ, ವಿರಕ್ತನು ಮತ್ತೊಬ್ಬ 'ಪ್ರಭು'ವಾಗಿ ಪರ್ಯಾಯವಾಗಿ ರಾಜಪ್ರಭುತ್ವಕ್ಕೆ ಮತ್ತು ವೈದಿಕ ಯಜಮಾನಿಕೆಗೆ ಮುಖಾಮುಖಿಯಾದುದನ್ನು ಕಾಣುತ್ತೇವೆ. ಈ ಕುರಿತು 'ಸಂಕ್ರಾಂತಿ' ನಾಟಕದಲ್ಲಿ ಬಸವಣ್ಣನನ್ನು ಬಿಜ್ಜಳನು ಪ್ರಶ್ನಿಸುತ್ತಾನೆ. ರಾಜ್ಯಕ್ಕೆ ದೊರೆ ನಾನೋ ಅಥವಾ ನೀನೋ ಎಂಬುದು ತಿಳಿಯದಾಗಿದೆ ಬಸವ.

ವೈದಿಕ ಧರ್ಮ, ಪೂಜೆ, ಆಚರಣೆಗಳನ್ನು ಪುಷ್ಟೀಕರಿಸಿದ ಬಸವಣ್ಣ ಆಗಿನ ಸಂದರ್ಭದಲ್ಲಿ ದುರ್ಬಲಗೊಳ್ಳುತ್ತಿದ್ದ ಪುರೋಹಿತಶಾಹಿ ಯಾಜಮಾನ್ಯಕ್ಕೆ ಒಂದು ರೀತಿಯಲ್ಲಿ ರಕ್ಷಕನಾಗಿಯೇ ನಿಂತಾನೆನೋ ಎಂಬಂತೆ ತೋರುತ್ತದೆ. ಬಸವಣ್ಣ ವೈದಿಕ ಧರ್ಮಕ್ಕೆ ಉಗ್ರ ವಿರೋಧವನ್ನು ವ್ಯಕ್ತಪಡಿಸುತ್ತಾನೆ. ಪುರೋಹಿತಶಾಹಿಯ ಜಾತಿಯ ಪೊಳ್ಳು ಔನತ್ಯವನ್ನು ಖಂಡಿಸುತ್ತಾನೆ ನಿಜ. ಆದರೆ ವ್ಯವಸ್ಥೆಯ ಚೌಕಟ್ಟಿನಲ್ಲಿಯೇ ಅವನು ತರಲೆತ್ನಿಸುವ ಬದಲಾವಣೆಗಳ ಬಗ್ಗೆ ಈ ನಾಟಕದಲ್ಲಿ ಕೆಲವು ಸಂದೇಹಗಳು ವ್ಯಕ್ತವಾಗುತ್ತವೆ. ಈ ಹಿನ್ನೆಲೆಯಲ್ಲಿ 'ಸಂಕ್ರಾಂತಿ'ಯಲ್ಲಿ ಬಿಜ್ಜಳನಿಂದ ನೇರ ಪ್ರಶ್ನೆಗಳಿಗೆ ಬಸವಣ್ಣ ಒಳಗಾಗುತ್ತಾನೆ, "ನೀನು ಬ್ರಾಹ್ಮಣ, ಸಂಸ್ಕೃತದಿಂದ ಮಹಾರಾಜರನ್ನು ಹತೋಟಿಯಲ್ಲಿಡುತ್ತಿದ್ದ ನೀನು ಈಗ ಕನ್ನಡದಿಂದ ಶೂದ್ರರನ್ನು ಶರಣರನ್ನಾಗಿಸಿ ಹತೋಟಿಯಲ್ಲಿಡುತ್ತೀ" ಹೀಗೆ ಬಸವಣ್ಣನ ನಡೆಗೂ ನುಡಿಗೂ ಕೆಲವೆಡೆ ತಾಳ-ಮೇಳ ಇಲ್ಲದ್ದನ್ನು, ಆತನ ದ್ವಂದ್ವ ವಿಚಾರಗಳನ್ನು ನಾಟಕದಲ್ಲಿ ರಾಜಪ್ರಭುತ್ವ ಮತ್ತು ಕೆಳವರ್ಗದವರು ಪ್ರಶ್ನಿಸುತ್ತಾರೆ. ನಾಟಕಕಾರರು ಬಸವಣ್ಣ ಮತ್ತು ಗಾಂಧಿವಾದಗಳೆರಡನ್ನು ಮೂಲಭೂತವಾಗಿ ಒಂದೇ ಸ್ವರೂಪದ್ದೆಂದು ಗ್ರಹಿಸಿ ವಿವೇಚಿಸುತ್ತಾರೆ.

'ಸಂಕ್ರಾಂತಿ' ನಾಟಕದಲ್ಲಿ ಪ್ರಭುತ್ವದ ರಾಜವೈಖರಿಯನ್ನು ಕುರಿತು ಬಿಜ್ಜಳನು ಬಸವಣ್ಣನಿಗೆ ಹೇಳುವ ಮಾತುಗಳು ಹೀಗಿವೆ. "ತಪ್ಪು ಮಾಡಿದವರನ್ನು ಹತ್ತಿಕ್ಕಬೇಕಾದ್ದು ನನ್ನ ಕೆಲಸ. ತಪ್ಪು ಇಲ್ಲದಾಗ ಕೂಡ ಜನರನ್ನು ಹತೋಟಿಯಲ್ಲಿಡಲು ತಪ್ಪನ್ನು ಹುಡುಕಿಕೊಂಡು ಹೋಗುವುದು ನನ್ನ ಕರ್ತವ್ಯ" ಅದರ ಜೊತೆಗೆ ವೈಯಕ್ತಿಕ ಶ್ರದ್ಧೆಯನ್ನು ಸಂಪ್ರದಾಯಕ್ಕೆ ಹಾಗೂ ರೂಢಿಯ ಮೌಲ್ಯಗಳಿಗೆ ವಿಶೇಷ ಒಲವು ತೋರಿಸುವುದನ್ನು ರಾಜನು ದೋಷವೆಂದು ಪರಿಗಣಿಸಿದಂತೆ ತೋರುವುದಿಲ್ಲ. ಏಕೆಂದರೆ 'ಸಂಕ್ರಾಂತಿ'ಯಲ್ಲಿ ಬ್ರಾಹ್ಮಣ ಕನ್ಯೆ ಉಷಾ ರಾಜಾಜ್ಞೆಯನ್ನು ಮೀರಿದರೂ ಬಿಜ್ಜಳ ಆಕೆಗೆ ಯಾವ ಶಿಕ್ಷೆಯನ್ನು ನೀಡುವುದೇ ಇಲ್ಲ. ಹೀಗೆ ರಾಜನು ವಿವಿಧ ಜಾತಿಗಳೊಂದಿಗೆ ವ್ಯವಹರಿಸುವಾಗ ರಾಜಪ್ರಭುತ್ವದ್ದೇ ಆದ ತರ್ಕಗಳು ನಿರ್ಣಾಯಕ ಪಾತ್ರ ವಹಿಸುತ್ತಿದ್ದವು.

ಧರ್ಮವು ಒಂದು ಸಮುದಾಯದ ಆಚರಣೆಯನ್ನು ತಿದ್ದುವ ಹಾಗೂ ರೂಪಿಸುವ ಅಧಿಕಾರವನ್ನು ಹೊಂದಿತ್ತು. ಈ ಧರ್ಮ ವಿಭಿನ್ನ ಮತ-ಸಂಪ್ರದಾಯಗಳ ರೂಢಮೂಲವಾಗಿ ಪ್ರಭುತ್ವದ ಅಧಿಕಾರವನ್ನು ಬೆಳೆಸಿಕೊಂಡು ಬಂದಿದ್ದಿತು. ಇಂಥ ಸಂಪ್ರದಾಯ, ಧರ್ಮ ಕೂಡ ರಾಜನನ್ನು ದೈವಾಂಶ ಸಂಭೂತನೆಂದೇ ಪ್ರತಿಪಾದಿಸಬೇಕಾಗಿತ್ತು. ಏಕೆಂದರೆ ಪ್ರಭುತ್ವದ ಅಲೌಕಿಕ ಮುಖ ಅವರ ಅಸ್ತಿತ್ವಕ್ಕೆ ಅನಿವಾರ್ಯವಾಗಿದ್ದಿತು. ಈ ಸಂಪ್ರದಾಯಗಳು ಕೆಲವು ಸಲ ರಾಜನೀತಿಗೆ ಹಾಗೂ ಹಿತಾಸಕ್ತಿಗೆ ಸಮಸ್ಯೆ ತಂದೊಡ್ಡಿದ್ದವು. ನಿರ್ದಿಷ್ಟ ಸಂಪ್ರದಾಯಗಳ ಆಚೆಗೆ ರಾಜ್ಯವು ವ್ಯವಹರಿಸಬೇಕಾದಾಗ ರಾಜನು ತನ್ನ ದೈವಾಂಶ ಸಂಭೂತತೆಯನ್ನು ಪ್ರಯೋಗಿಸಿ ಮೂಢ ಸಂಪ್ರದಾಯಗಳನ್ನು ಹಾಗೂ ಪ್ರಭುತ್ವದಲ್ಲಿ ತತ್ವಗಳನ್ನು ತನ್ನ ಅನುಕೂಲಕ್ಕೆ ತಕ್ಕಂತೆ ಬಗ್ಗಿಸಿಕೊಳ್ಳುತ್ತಿದ್ದನು. ಹೀಗೆ ರಾಜಪ್ರಭುತ್ವದಲ್ಲಿ ಧರ್ಮವು ಮಧ್ಯವರ್ತಿಯಾಗಿ, ಕೆಲವೊಮ್ಮೆ ಸಂಘರ್ಷಾತ್ಮಕ ಶಕ್ತಿಯಾಗಿ ಬೆಳೆದುಬಂದಿತ್ತು.

ಆದರೆ ಪ್ರಭುತ್ವದ ಅಸ್ತಿತ್ವಕ್ಕೆ ಧಕ್ಕೆ ಉಂಟಾಗುವ ಸಂದರ್ಭ ಬಂದಾಗ ಧಾರ್ಮಿಕ ಅಂಶಗಳು ಪ್ರಭುತ್ವವನ್ನು ಮಾನ್ಯ ಮಾಡುವ ವ್ಯವಸ್ಥೆಗಳಾಗಿ ಪುನಃ ಅವತರಿಸುತ್ತಿದ್ದನ್ನು ಸ್ವಾರಸ್ಯಕರವಾಗಿ ತೋರುತ್ತದೆ. ಇದಕ್ಕೆ 'ತಲೆದಂಡ' ನಾಟಕವನ್ನೇ ಉದಾಹರಣೆಯಾಗಿ ನೋಡಬಹುದು. ಮಗ ಸೋವಿದೇವ ತಂದೆಯನ್ನು ಗೃಹ ಬಂಧನದಲ್ಲಿರಿಸಿದ್ದಾನೆ. ಆಗ ಬಿಜ್ಜಳ ನಗುತ್ತ, ಬಿಕ್ಕುತ್ತ! "ಬಸವಣ್ಣ ಬಂದ, ರಂಭಾ, ನಾ ಮತ್ತ ರಾಜ ಅಕ್ಕೇನಿ, ನೀ ರಾಣಿ ಆಗುತ್ತೀ. ಒಂದೂವರೆ ಲಕ್ಷ ಶರಣರು ಬಂದಾರ". 'ಮಹಾಚೈತ್ರ' ನಾಟಕದಲ್ಲಿ

ನಾರಾಯಣ ಶ್ರಮಿಕ ಬಿಜ್ಜಳನಿಗೆ ಹೀಗೆ ಹೇಳುತ್ತಾನೆ. "ಅಗ್ನಿಹೋಮ ಯಜ್ಞವನ್ನು ತಾವು ಈಡೇರಿಸಿದ ಪಕ್ಷದಲ್ಲಿ ಕಷ್ಟ ಪರಂಪರೆಗಳೆಲ್ಲ ನಿವಾರಣೆಯಾಗಿ ಇಷ್ಟಾರ್ಥಗಳು ಸಿದ್ಧಿಸುತ್ತವೆ". ಇಲ್ಲಿ ಮೂಲಭೂತವಾದಿ ಶಕ್ತಿಗಳು ಹಾಗೂ ಪ್ರಭುತ್ವ ಶಕ್ತಿಗಳು ತಮ್ಮ ಶಕ್ತಿವರ್ಧನೆಗಾಗಿ ಧಾರ್ಮಿಕ ಪ್ರಶ್ನಾವಳಿಯನ್ನು ಹೇಗೆ ಪುನರ್ ಸ್ಥಾಪಿಸಿಕೊಳ್ಳುತ್ತಿದ್ದವು ಎಂಬುದನ್ನು ಈ ನಾಟಕಗಳು ಧ್ವನಿಸುತ್ತವೆ.

ಪ್ರಭುತ್ವದ ಮೂಲಭೂತ ಪ್ರವೃತ್ತಿಯಾದ ಹಿಂಸೆ ಇಲ್ಲಿ ವ್ಯಕ್ತಿ ಹಾಗೂ ಸಮಾಜವನ್ನು ತೀವ್ರವಾಗಿ ಸುತ್ತುವರೆದಿದೆ. 'ಸಂಕ್ರಾಂತಿ' ನಾಟಕದಲ್ಲಿ ಇದಕ್ಕೆ ಪೂರಕವಾದ ಮಾತುಗಳನ್ನು ಬಿಜ್ಜಳ ಹೇಳುತ್ತಾನೆ. "ನಾಳೆ ಸಂಕ್ರಾಂತಿ, ಸೂರ್ಯ ತನ್ನ ಪಥ ಬದಲಿಸುವ ವೇಳೆ ಸಂಕ್ರಾಂತಿ, ಭೂಮಿಗೆ ರಕ್ತ ಎರೆಯಬೇಕು. ಈ ರಾಜ್ಯಕ್ಕೆ ಇವತ್ತಿನಿಂದ ಶಾಂತಿ ದೊರೆಯಬೇಕು. ರುದ್ರನ ತಲೆದಂಡ ನಮ್ಮೆಲ್ಲರಿಗೆ ಪಾಠವಾಗಬೇಕು. ನನ್ನ ರಾಜ್ಯಕ್ಕೆ ಪ್ರೇಮ ಮತ್ತಷ್ಟು ಪ್ರೇಮ ಬೇಕು. ಹೀಗೆ ಕೆಲವು ಧಾರ್ಮಿಕ ನಂಬಿಕೆಗಳನ್ನು ಬೆಳೆಸಿಕೊಂಡು ಹಿಂಸೆಯ ಮೂಲಕ ತನ್ನ ಅಧಿಕಾರದ ಮೂಲವನ್ನು ಭದ್ರಪಡಿಸಿಕೊಳ್ಳುವ ಪ್ರಭುತ್ವದ ಚಾಲಾಕಿತನ ಇಲ್ಲಿ ಕೆಲಸ ಮಾಡಿದೆ.

'ಮಹಾಚೈತ್ರ'ದ ಕೊನೆಯ ಸನ್ನಿವೇಷದಲ್ಲಿ ವರ್ಣಸಂಕರದ ವಿವಾಹ ಭೀಕರ ಹಿಂಸೆಯಲ್ಲಿ ಪರ್ಯಾವಸಾನವಾಗುತ್ತದೆ. ಬಸವಣ್ಣನು ಕಲ್ಯಾಣವನ್ನು ತೊರೆದ ಮೇಲೆ ಪುರೋಹಿತಶಾಹಿ ಮತ್ತು ರಾಜ ಪ್ರಭುತ್ವದ ಯೋಜಿತ ಹಲ್ಲೆಗೆ ಶರಣ ಸಮುದಾಯ ತುತ್ತಾಗುತ್ತದೆ. ಈ ನಾಟಕದಲ್ಲಿ ರಾಜ ಪ್ರಭುತ್ವವೆ ಗೆಲ್ಲುತ್ತದೆ. 'ಸಂಕ್ರಾಂತಿ' ನಾಟಕದಲ್ಲಿ ರಾಜಪ್ರಭುತ್ವವನ್ನು ಪ್ರಶ್ನಿಸುತ್ತಲೇ ಬಸವಣ್ಣನವರು ಸಮಾಜದಲ್ಲಿ ಬದಲಾವಣೆ ತರಲೆತ್ನಿಸಿದರು. 'ತಲೆದಂಡ ಮತ್ತು ಮಹಾಚೈತ್ರ' ನಾಟಕಗಳಲ್ಲಿ ಹಿಂಸೆ ಮತ್ತು ವಿದ್ರೋಹ ಕೃತ್ಯಗಳ ಮೂಲಕ ಶರಣರು ರಾಜಪ್ರಭುತ್ವವನ್ನು ತರಾಟೆಗೆ ತೆಗೆದುಕೊಂಡರು.

'ಶಿವರಾತ್ರಿ' ನಾಟಕ ಪ್ರಭುತ್ವ ಮತ್ತು ಪ್ರಜಾಪ್ರಭುತ್ವದ ಸಂಘರ್ಷವು ಪ್ರಮುಖ ನೆಲೆಯಾಗಿದೆ. ಬಿಜ್ಜಳ ಮತ್ತು ಬಸವಣ್ಣನ ನಡುವೆ ನಡೆಯುವ ವಾದ ಹಾಗೂ ಅನೇಕ ಪಾತ್ರಗಳು ಪ್ರಭುತ್ವವನ್ನು ವಿರೋಧಿಸುವುದರ ಜೊತೆಗೆ ಪ್ರಜಾಪ್ರಭುತ್ವಪರವಾದ ನೆಲೆಯನ್ನು ಕಾಣುತ್ತೇವೆ. ಶಿವರಾತ್ರಿಯಲ್ಲಿ ಬರುವ ಶರಣರು, ವೈದಿಕರು, ದಲಿತರು ಮುಂತಾದ ಪಾತ್ರಗಳ ಮೂಲಕ ಇದನ್ನು ನೋಡಬಹುದಾಗಿದೆ. ನಾಟಕದ ಕೇಂದ್ರ ವಸ್ತು ಸಾವಂತ್ರಿಯ ಮನೆಯಲ್ಲಿ ನಡೆಯುತ್ತಲಿದ್ದು, ಅಲ್ಲಿ ಬಸವ-ಬಿಜ್ಜಳ ಪಾಲ್ಗೊಂಡದ್ದು ಇಬ್ಬರ ನಡುವಿನ ವಾದ-ವಿವಾದಗಳು ಇಂತಹ ನೆಲೆಯನ್ನು ವ್ಯಕ್ತಪಡಿಸುವ ಸಂದರ್ಭಗಳಾಗಿ ಕಂಡುಬರುತ್ತವೆ. ಈ ವಾದ-ವಿವಾದಗಳು ಅವರವರ ತತ್ವಗಳ ಮೇಲೆ ಬಿಂಬಿತವಾಗಿರುವುದರಿಂದ ಸಂಘರ್ಷದ ನೆಲೆಯನ್ನು ಅಲ್ಲಲ್ಲಿ ಕಾಣುತ್ತೇವೆ. 'ಶಿವರಾತ್ರಿ' ನಾಟಕದಲ್ಲಿ ಕಂಬಾರರ ಉದ್ದೇಶ ನೆರವೇರಿರುವ ಚಿಹ್ನೆಗಳು ಕಾಣಸಿಗುತ್ತವೆ. ಬಸವಣ್ಣನನ್ನು ಪವಾಡಪುರುಷರೆಂದು ಬಣ್ಣಿಸಿಲ್ಲ, ಬದಲಾಗಿ ಕೇವಲ ಸಾಮಾನ್ಯ ಪ್ರಜೆಯಂತೆ ಚಿತ್ರಿಸಿದ್ದಾರೆ. ಪ್ರತಿಯೊಬ್ಬ ಪ್ರಜೆಗೂ ತನ್ನದೇ ಆದ ಹಕ್ಕುಗಳಿರುವಂತೆ ಅವುಗಳನ್ನು ಪಡೆದುಕೊಳ್ಳಲು ನಡೆಸಬೇಕಾದ ಹೋರಾಟವನ್ನು ನಾವು ಈ ನಾಟಕದಲ್ಲಿ ಕಾಣುತ್ತೇವೆ.

'ಶಿವರಾತ್ರಿ ನಾಟಕವು ಅರಮನೆಯನ್ನು ಪ್ರಭುತ್ವದ ನೆಲೆಯಾಗಿ ಕಂಡು ಮಹಾಮನೆಯನ್ನು ಪ್ರಜಾಪ್ರಭುತ್ವದ ನೆಲೆಯಾಗಿ ಕಾಣುತ್ತದೆ. "ಕಂಬಾರರನ್ನು ಕಾಡುತ್ತಿರುವ ಸಮಸ್ಯೆಯು ಬಸವಣ್ಣನ ಸಮಸ್ಯೆಯಲ್ಲ, ಅವರನ್ನು ಕಾಡುತ್ತಿರುವುದು ಬಿಜ್ಜಳನ ದೃಷ್ಟಿಕೋನ ಅಂದರೆ ವ್ಯವಸ್ಥೆಯ ದೃಷ್ಟಿಕೋನದಲ್ಲಿ ಸಮಾನತೆ ಮತ್ತು ಆಧ್ಯಾತ್ಮಕ್ಕೆ ಸ್ಥಾನವೇಕೆ ಸಿಕ್ಕುವುದಿಲ್ಲ ಎಂಬುದೇ ಅವರ ಸಂಕಟವಾಗಿದೆ. ಇದರ ರೂಪಕವಾಗಿ ಕಂಬಾರರಿಗೆ ಬಿಜ್ಜಳ ಮತ್ತು ಬಸವಣ್ಣನವರ ಮಧ್ಯದ ವೈಚಾರಿಕ ಸಂಘರ್ಷವು ಕಂಡಿದೆ".

ಮಹಾಮನೆಯ ಮೇಲೆ ಹಿಡಿತ ಸಾಧಿಸಬೇಕೆಂದು ತನ್ನ ಆಡಳಿತದ ಮೂಲಕ ಪ್ರಭುತ್ವದ ಶಕ್ತಿಯನ್ನು ಪ್ರದರ್ಶಿಸುವ ಬಿಜ್ಜಳ ಒಂದು ಕಡೆ ನಿಲ್ಲುತ್ತಾನೆ. ಅರಮನೆಯ ತತ್ವಗಳು ಮಹಾಮನೆಯಿಂದಲೇ ರೂಪುಗೊಳ್ಳಬೇಕು ಎಂಬ ಜವಾಬ್ದಾರಿಯನ್ನು ಹೊತ್ತ ಬಸವಣ್ಣ ಇನ್ನೊಂದು ಕಡೆ ನಿಲ್ಲುತ್ತಾನೆ. ಆಕ್ರಮಣಕಾರಿ ನಿಲುವು, ಹೋರಾಟ, ಶಕ್ತಿ ಪ್ರದರ್ಶನ ಇವುಗಳೇ ಒಬ್ಬ ರಾಜನ ಅರ್ಹತೆ ಎಂದು ತಿಳಿದಿರುವ ವ್ಯಕ್ತಿಗಳು ಬಿಜ್ಜಳನನ್ನು ಪ್ರಭುತ್ವದ ಪ್ರತಿನಿಧಿಯನ್ನಾಗಿಸುತ್ತಾರೆ. ಬಿಜ್ಜಳನನ್ನು ದೇವರ ರೂಪದಲ್ಲಿ ಪೂಜಿಸುವ ಚಾಡಿಕೋರರು ಬಿಜ್ಜಳನು ನಮ್ಮ ಹಾಗೆ ಸಾಮಾನ್ಯ ಮನುಷ್ಯ ಎಂಬುದನ್ನು ಮರೆಯುತ್ತಾರೆ. "ರಾಜನ ಕಾನೂನಿಗೆ ದೈವ ಪ್ರಜ್ಞೆ ಇರಬೇಕು" ಎಂಬ ಮಾತನ್ನು ಅರಿಯದ ಬಿಜ್ಜಳ ತಾನು ದೈವವೆಂಬಂತೆ ವರ್ತಿಸುತ್ತಾನೆ.

'ಶಿವರಾತ್ರಿ' ನಾಟಕದ ಆರಂಭದಲ್ಲೇ ಬಿಜ್ಜಳನ ವಿರೋಧ ಅಲೆ ಕಾಣಸಿಗುತ್ತದೆ. ನಾಟಕದ ಪ್ರಾರಂಭದಲ್ಲಿ ಕಲ್ಯಾಣದ ನಗರ ದೇವತೆ(ಕಲ್ಯಾಣ) ಹುಚ್ಚಿಯಾಗಿ ಅಲೆಯುತ್ತಾ ಕಾಲಜ್ಞಾನವನ್ನು ಸಾರುತ್ತಾಳೆ. ಬಿಜ್ಜಳನ ದುಷ್ಟಕೃತ್ಯಗಳಿಂದ ಕಲ್ಯಾಣದ ಮೇಲೆ ಬಿಜ್ಜಳನ ಪ್ರಭುತ್ವದ ಹಿಡಿತದಿಂದ ತಾವು ಅನುಭವಿಸುತ್ತಿರುವ ನೋವನ್ನು ಹೊರಕೇರಿಯಲ್ಲಿರುವ ಜನರು ತಮ್ಮಲ್ಲೇ ಪ್ರತಿಭಟನೆಯ ಅಲೆಯಾಗಿ ರೂಪಿಸಿಕೊಳ್ಳುತ್ತಾರೆ. ಇಲ್ಲಿ ಹೊರಕೇರಿಯ ತಂಗವ್ವ "ಆ ನನ್ನ ಹುಚ್ಚ್ ರಾಜಾ ಇನ್ ಯಾರ್‍ಯಾರನ್ನ ಕೊಂದನೋ ಏನ್ ಗತಿಯೋ! ಎಂದು ಹೇಳುವುದರ ಮೂಲಕ ರಾಜನ ಮತ್ತು ಅವನ ಮೇಲಿರುವ ತಿರಸ್ಕಾರವನ್ನು ವ್ಯಕ್ತಪಡಿಸುತ್ತಾರೆ. ಹೊರಕೇರಿಯ ಜನರಿಗೆ ಬಿಜ್ಜಳನ ಬಗೆಗೆ ಒಂದು ರೀತಿಯ ಅವ್ಯಕ್ತ ಭಯ ಕಾಡುತ್ತದೆ. ಬಿಜ್ಜಳ ಜನರ ಮೇಲೆ ಹೇರುತ್ತಿರುವ ಅಧಿಕಾರ, ಅವನ ಪ್ರಭುತ್ವವನ್ನು ತಿರಸ್ಕರಿಸಲು ಕಾರಣ ಬಿಜ್ಜಳನ ಮೇಲೆ ಜನರಿಗೆ ಎಂತಹ ತಿರಸ್ಕಾರವೆಂದರೆ ಅವನ ಸಾವನ್ನು ಬಯಸುವಂತಹ ತಿರಸ್ಕಾರ ಒಂದು ಮಾತಿನಲ್ಲಿ "ರಾಜ ಗೊಟಕ್ಕಾಂತಾನೇನ ಮತ್ತಾ! ಎಂಬ ಪ್ರಶ್ನೆಯನ್ನು ಮುದುಕಪ್ಪ ಕೇಳುತ್ತಾನೆ. ರಾಜನ ಪ್ರಭುತ್ವಕ್ಕೆ ಬದಲಾಗಿ ಮಹಾಮನೆಯ ಪ್ರಜಾಪ್ರಭುತ್ವ ಉದಯವಾಗಬೇಕೆಂಬುದಾಗಿ ಹೊರಕೇರಿಯ ಜನರಲ್ಲಿ ಮುಂದಿಡುತ್ತದೆ.

ಸಂಗಯ್ಯ ಮತ್ತು ಹುಚ್ಚಿಯ ನಡುವೆ ಸಂಭಾಷಣೆ ನಡೆಯುವಾಗ ಹುಚ್ಚಿ ಸಂಗಯ್ಯನಲ್ಲಿ ಹೇಳುತ್ತಾನೆ. "ಅರಮನೆಯಲ್ಲಿದ್ದವರಿಗೆ ಮಹಾಮನೆ ಕಾಣಲಿಲ್ಲ, ಮಹಾಮನೆಯಲ್ಲಿದ್ದವರಿಗೆ ಅರಮನೆ ಕಾಣಲಿಲ್ಲ" ಅಂದರೆ ಬಿಜ್ಜಳನ ಪ್ರಭುತ್ವಕ್ಕೆ ಕಣ್ಣು ಕಾಣದಂತಾಗಿ ಬರಿಯ ಅಧಿಕಾರದ ಮದದಲ್ಲಿ ತನ್ನ ನಿಯಮಗಳನ್ನು ಜಾರಿಗೊಳಿಸುತ್ತಾನೆ. ಬಿಜ್ಜಳ ಸಾವಂತ್ರಿಯ ಮನೆಗೆ ಬರುತ್ತಾನೆ. ತಾನು ರಾಜನಾಗಿ ಸೂಳೆಯ ಮನೆಗೆ ಹೋಗುತ್ತಿರುವುದನ್ನು ಜನರು ಎಲ್ಲಿ ತಪ್ಪಾಗಿ ತಿಳಿಯುತ್ತಾರೋ ಎಂಬ ಆಲೋಚನೆಯಿಂದ ವೇಷಾಂತರದಲ್ಲಿ ಬರುತ್ತಾನೆ. ಬಿಜ್ಜಳ ಕಾಮಾಕ್ಷಿಯನ್ನು ಬರಹೇಳು ಎಂದಾಗ ಸಾವಂತ್ರಿ ಅವಳಿಂದು ಬರಲಾರಳು. ಅವಳು ಮತ್ತೊಬ್ಬರ ಸೇವೆಯಲ್ಲಿದ್ದಾಳೆ ಎಂದು ಖಡಾಖಂಡಿತವಾಗಿ ನುಡಿಯುತ್ತಾಳೆ. ತನ್ನನ್ನು ಸ್ವಾಗತಿಸಲು ಬಾರದಿರುವ ಕಾಮಾಕ್ಷಿ ತನಗೆ ಈಗಲೇ ಬೇಕೆಂಬ ಅಧಿಕಾರವಾಣಿಯಿಂದ ಬಿಜ್ಜಳ ಗುಡುಗುತ್ತಾನೆ. ಆದರೆ ಈ ಅಧಿಕಾರದ ವಾಣಿಯನ್ನು ಸಾವಂತ್ರಿ ಅಷ್ಟೇ ಸೌಮ್ಯವಾಗಿ ತಿರಸ್ಕರಿಸಿತ್ತಾಳೆ.

ಬಸವನ ವಿಚಾರಧಾರೆಗಳನ್ನು ಒಪ್ಪದ ಬಿಜ್ಜಳ ತನ್ನ ಅಧಿಕಾರದಾಹದಿಂದ ತನ್ನ ಶಕ್ತಿ ಸಾಮರ್ಥ್ಯಗಳನ್ನು ಕೊಚ್ಚಿಕೊಳ್ಳುವಂತೆ ರಾಜ್ಯದ ಪ್ರಜೆಗಳ ರಕ್ಷಣೆಗೆ ಶಾಸ್ತ್ರಗಳಿವೆ, ಧರ್ಮವಿದೆ, ಕಾನೂನಿದೆ ಎಂಬ ಅಂಶವನ್ನು ಅಧಿಕಾರದ ಗತ್ತಿನಲ್ಲಿ ಹೇಳುತ್ತಾನೆ. ಅದೇ ಅಧಿಕಾರದ ಗತ್ತಿನಲ್ಲಿ ತನಗೆ ಕಾಮಾಕ್ಷಿಯ

ಅವಶ್ಯಕತೆಯಿದೆ. ಅವಳನ್ನು ಈಗಲೇ ತಂದು ನಿಲ್ಲಿಸು ಎಂಬಂತೆ ಆದೇಶಿಸುತ್ತಾನೆ. ಇದಕ್ಕೆ ಉತ್ತರವಾಗಿ ವಿರೋಧದ ಧ್ವನಿಯಲ್ಲಿ ಸಾವಂತ್ರಿಯು

"ಸ್ವಚ್ಛವಾಗಿ ದೇಹ ಮಾರುವುದಕ್ಕೆ ಬಂದವರಲ್ಲ ನಾವು
ನಮಗೂ ನಿಯಮಗಳಿವೆ ಸ್ವಾಮಿ, ಸಂದರ್ಭಾನುಸಾರ
ಮುಖನೋಡಿ ಮಣೆ ಹಾಕುವ ನಿಯಮಗಳಲ್ಲ ಇವು
ಎಲ್ಲರಿಗೂ ಸಮಾನವಾದ ನಿಯಮಗಳು"[4]

ಎಂದು ತನ್ನ ವೃತ್ತಿಧರ್ಮದ ನಿಯಮವನ್ನು ಹಾಗೂ ತಾನು ಪಾಲಿಸುತ್ತಿರುವ ತನ್ನದೇ ಆದ ಕಾನೂನುಗಳು ಈ ದೇಶದಲ್ಲಿ ಪ್ರಜೆಯಾದವನಿಗೆ ಇರಬೇಕಾದ ಕನಿಷ್ಠ ಸ್ವಾತಂತ್ರ್ಯ ಎಂಬುದನ್ನು ತಿಳಿಹೇಳುತ್ತಾಳೆ. ಸಾವಂತ್ರಿಯು ಬಿಜ್ಜಳನು ಬಲತ್ಕಾರದಿಂದ ಪ್ರಭುತ್ವ ಸ್ಥಾಪಿಸಲು ಹೊರಟ್ಟಿದ್ದಾನೆ ಎಂದು ತಿಳಿದು ಅದನ್ನು ವಿರೋಧಿಸುತ್ತಾಳೆ. ಸಾವಂತ್ರಿಯು ರಾಜನ ಪ್ರಭುತ್ವವನ್ನು ದಿಕ್ಕರಿಸುತ್ತಾಳೆ. ಅಲ್ಲದೇ ಆತನ ಯಾವುದೇ ಕೂಗಾಟಕ್ಕೆ ಜಗ್ಗದ ಸಾವಂತ್ರಿ ಬಿಜ್ಜಳನನ್ನು ಸಾಮಾನ್ಯ ಗಿರಾಕಿಯಂತೆ ಕಾಣುತ್ತಾಳೆ.

ಮುಗ್ಧ ಸಂಗಯ್ಯನನ್ನು ಹುಡುಕುತ್ತಾ ಸೂಳೆ ಸಾವಂತ್ರಿಯ ಮನೆಗೆ ಬರುವ ಬಸವ ಬಿಜ್ಜಳನನ್ನು ಕಂಡು ಆಶ್ಚರ್ಯಚಕಿತನಾಗುತ್ತಾನೆ. ತಾನು ಊಹಿಸದಿರುವ ಘಟನೆ ನಡೆಯಲಿದೆ ಎಂಬುದರ ಅರಿವು ಇಲ್ಲದೇ ಮನೆಗೆ ಪ್ರವೇಶಿಸುವ ಬಸವ ಬಿಜ್ಜಳನ ಸ್ವಾಗತವನ್ನು ಕಾಣುತ್ತಾನೆ. ಬಸವನ ತತ್ವಗಳಿಗಾಗಿ ಕಾದುಕುಳಿತ ಸಂಗಯ್ಯನನ್ನು ಮುಂದಿಟ್ಟುಕೊಂಡು ಬಸವನೇ ಸಂಗಯ್ಯನನ್ನು ತನ್ನ ವಿರುದ್ಧ ನಿಲ್ಲಲೆಂದು ಕಳುಹಿಸಿದ್ದಾನೆ. ಎಂಬ ಮಾತು ಹೊರಹಾಕುತ್ತಾನೆ. ರಾಜನ ಸ್ವತ್ತಾದ ಕಾಮಾಕ್ಷಿಯನ್ನು ಸಾಮಾನ್ಯಪ್ರಜೆಯಾದ ಸಂಗಯ್ಯ ಬಂದು ಆಚರಿಸುವುದೆಂದರೆ ಘೋರ ಅಪರಾಧವೆಂಬಂತೆ ಮಾತನಾಡುತ್ತಾನೆ. ಬಿಜ್ಜಳನ ಮಾತುಗಳಲ್ಲಿ ಸಾಮಾನ್ಯ ಪ್ರಜೆಯಂತಿದ್ದ ಬಸವಣ್ಣ ಇಂದು ಜನರ ದೃಷ್ಟಿಯಲ್ಲಿ ಪವಾಡ ಪುರುಷನಂತೆ ವಿಜೃಂಭಿಸುತ್ತಾನೆ. ಬಿಜ್ಜಳನನ್ನು ಜನಗಳು ಆಲಿಸದಂತಾಗಿದ್ದರೆ ಎಂದು ಬಸವನ ಮುಂದೆ ಅವನ ಪವಾಡಗಳ ಕುರಿತು ಹೇಳುತ್ತಾನೆ. ಪ್ರಜಾಪ್ರಭುತ್ವದ ನೆಲೆಯನ್ನು ಮತ್ತು ಅಲೆಯನ್ನು ಸೃಷ್ಟಿಸಿರುವ ಬಸವಣ್ಣ ಬಿಜ್ಜಳನ ಕಾನೂನುಗಳಿಗೆ ನಡುಗದೇ ಬಿಜ್ಜಳನನ್ನೇ ಬಡಪಾಯಿಯಾಗಿ ಮಾಡಿದ್ದಾನೆ ಎಂಬ ಅರ್ಥಗಳು ಬಿಜ್ಜಳನ ಮಾತಿನಲ್ಲಿ ಸುಳಿಯುತ್ತಿವೆ. ಬಿಜ್ಜಳನಿಗೆ ಬಸವ ಇಷ್ಟವಾದರೂ ತನ್ನ ಪ್ರಭುತ್ವದ ಅಧಿಕಾರ ಎಲ್ಲಿ ಕಲಚಿ ಬೀಳುತ್ತದೋ ಎಂಬ ಭಯವಿದೆ. ಬಸವಣ್ಣ ಸೃಷ್ಟಿಸಿರುವ ಅಲೆ ಎಲ್ಲಿ ಪರಿಣಮಿಸುತ್ತದೆಯೋ ಎಂಬ ಭಯವಿದೆ. ಪವಾಡ ಪುರುಷನೆಂದು ಕರೆಯುವ ಬಿಜ್ಜಳ, ಪವಾಡದಿಂದ ಜನರನ್ನು ನಿನ್ನ ನುಡಿಯಂತೆ ನಡೆಯುವಂತೆ ಪಳಗಿಸಿರುವೆ ಎಂದು ಹೇಳುತ್ತಾನೆ. ಆ ನಂತರದ ಬಸವ-ಬಿಜ್ಜಳರ ನಡುವೆ ರಾಜಪ್ರಭುತ್ವ ಮತ್ತು ಪ್ರಜಾಪ್ರಭುತ್ವದ ತತ್ವ ನೆಲೆಗಳ ವಾದ-ವಿವಾದಗಳು ಪ್ರಾರಂಭವಾಗುತ್ತವೆ. ಬಿಜ್ಜಳನ ರಾಜಧರ್ಮದ ವಿರುದ್ಧವಾಗಿ ಬಸವ ಧರ್ಮ ಯುದ್ಧವನ್ನು ಸಾರಿರುವನೆಂದು ಭಾವಿಸುವ ಬಿಜ್ಜಳ ಬಸವನನ್ನು ಪ್ರಶ್ನಿಸುವನು.

ಬಿಜ್ಜಳ ಬಸವನ ಯಾವುದೇ ಮಾತುಗಳಿಗೆ ಜಗ್ಗದ ಕಾರಣ ಸಾವಂತ್ರಿಯು ಕಲ್ಯಾಣ ನಗರ ಮತ್ತೊಂದು ಕೂಡಲಸಂಗಮವಾಗುತ್ತಿತ್ತು. ಆದರೆ ಬಿಜ್ಜಳನ ಮಂದ ಬುದ್ಧಿಯಿಂದ ಕಲ್ಯಾಣ ನಾಶವಾಯಿತು ಎಂಬ ಅಂಶವನ್ನು ಬಿಜ್ಜಳನ ಮುಂದೆ ತೆರೆದಿಡುತ್ತಾಳೆ. ಅಲ್ಲಿಗೆ ಬರುವ ದಾಮೋದರನು ಕೂಡ ಸಹಿತ ಬಿಜ್ಜಳನ ವಿಧಾನವನ್ನು ವಿರೋಧಿಸುತ್ತಾನೆ. ಬಸವನ ಜೊತೆಯಲ್ಲಿದ್ದ ಬಿಜ್ಜಳ ತರುಣ ಬಿಜ್ಜಳನಂತೆ ಕಾಣುತ್ತಿದ್ದನು. ಆದರೆ ಈಗ ತರುಣ ಬಿಜ್ಜಳನ ಭೂತದಂತೆ ಕಾಣುತ್ತಾನೆ. ಏಕೆಂದರೆ ಬಿಜ್ಜಳನಿಗೆ

ಅಧಿಕಾರವೆಂಬ ವಾದದ ಪೊರೆ ಕಣ್ಣಿನ ಸುತ್ತ ಆವರಿಸಿ ಕಲ್ಯಾಣಕ್ಕೆ ಯಾವುದು ಒಳ್ಳೆಯದು ಯಾವುದು ಕೆಟ್ಟದ್ದು ಎಂದು ಅರಿವಿಲ್ಲದಾಗಿದೆ. ಕೊಂಡೆಯರು ಹೇಳಿದ ಚಾಡಿ ಮಾತುಗಳನ್ನು ಕೇಳುವ ಬಿಜ್ಜಳ ತಾನು ರೂಪಿಸಿರುವ ವ್ಯವಸ್ಥೆಯನ್ನು ಯಾರು ಅಲುಗಾಡಿಸಲು ಸಾಧ್ಯವಿಲ್ಲ ಎಂದುಕೊಂಡಾಗಲೇ ಕಲ್ಯಾಣ ಬದಲಾವಣೆಯ ಜಾಡನ್ನು ಹಿಡಿದು ರಾಜನ ಅಧಿಕಾರವನ್ನು(ಪ್ರಭುತ್ವ) ಹಿಮ್ಮೆಟ್ಟಿ ಶರಣ ಧರ್ಮ ರೂಪಿಸಿಕೊಂಡು ಪ್ರಜಾಪ್ರಭುತ್ವದ ನಾಡಾಗಿ ಬೆಳೆಯಲು ಅಣಿಯಾಗುತ್ತದೆ. ಈ ನಾಟಕ ಕೊನೆಯಲ್ಲಿ ರಾಜ ಪ್ರಭುತ್ವವೇ ಕೊನೆಗೊಂಡು ಪ್ರಜಾಪ್ರಭುತ್ವಕ್ಕೆ ನಾಂದಿಯಾಗುತ್ತದೆ.

ಡಾ.ಬಿ.ಎಂ.ಪುಟ್ಟಯ್ಯ ತಮ್ಮ ಮುಖಾಮುಖಿ ಸಮಾಜ ಸಂಸ್ಕೃತಿ ಚಳುವಳಿಯಲ್ಲಿ ಹೇಳುವಂತೆ "ಹೋರಾಟಗಳು ಕಾನೂನುಗಳನ್ನು ಪಾಲಿಸಬೇಕು, ಕಾನೂನುಗಳು ಚೌಕಟ್ಟಿನೊಳಗೆ ನಡೆಯಬೇಕು ಎಂದು ಪ್ರಭುತ್ವ ಬಯಸುತ್ತದೆ. ಮತ್ತೊಂದು ಕಡೆ ಪ್ರಭುತ್ವವೇ ಕಾನೂನುಗಳನ್ನು ಗಾಳಿಗೆ ತೂರುತ್ತದೆ"[3] ಈ ವಾಕ್ಯವನ್ನು ತೆಗೆದುಕೊಂಡಾಗ ಶಿವರಾತ್ರಿ ನಾಟಕದಲ್ಲಿ ಬಿಜ್ಜಳನು ಸಹ ಪ್ರಭುತ್ವ ಸ್ಥಾಪಿಸಲು ಮುಂದಾಗುತ್ತಾನೆ. ತನ್ನ ಎಲ್ಲಡೆಯನ್ನು ಮೀರಿ ಅನಾಗರಿಕನಂತೆ ವರ್ತಿಸುತ್ತಾನೆ.

ಶಿವರಾತ್ರಿ ನಾಟಕದಲ್ಲಿ ಬಿಜ್ಜಳ ಸಾವಂತ್ರಿ ಹೋಗುವ ಸನ್ನಿವೇಷ ಒಬ್ಬ ರಾಜನಿಗೆ ಇರಬೇಕಾದ ಅರ್ಹತೆಗಳನ್ನು ಅಥವಾ ಮಾನದಂಡಗಳನ್ನು ಮರೆಯುತ್ತಾನೆ. ಸೂಳೆಯ ಮನೆಯಲ್ಲಿ ತನ್ನ ರಾಜಪ್ರಭುತ್ವವನ್ನು ಸ್ಥಾಪಿಸಲು ಮುಂದಾಗಿ ಸೋಲುತ್ತಾನೆ. ಈ ನಾಟಕದಲ್ಲಿ ಬಿಜ್ಜಳನ ಸೋಲು ರಾಜಪ್ರಭುತ್ವದ ಸೋಲಾಗಿ ಪ್ರಜಾಪ್ರಭುತ್ವದ ದಾರಿಗೆ ಎಡೆಮಾಡಿಕೊಡುತ್ತದೆ. ಬಸವಣ್ಣನಿಗೆ ಸಮಾಜ ಬಹಳ ಮುಖ್ಯವಾದರೆ ಆದರೆ ಬಿಜ್ಜಳನಿಗೆ ಸಾಮಾಜಿಕ ಸುಧಾರಣೆಯ ಜೊತೆಗೆ ಪ್ರಭುತ್ವ, ಅಧಿಕಾರ ಮುಖ್ಯವಾಗಿತ್ತು. ತನ್ನ ಅಧಿಕಾರವನ್ನು ಉಳಿಸಿಕೊಳ್ಳಲು ಬಿಜ್ಜಳನಿಗೆ ಬಸವಣ್ಣನು ಅನಿವಾರ್ಯವಾಗಿದ್ದಂತೆ, ಬಸವಣ್ಣನಿಗೆ ತನ್ನ ಸಾಮಾಜಿಕ, ಧಾರ್ಮಿಕ ಸುಧಾರಣೆಗೆ ಬಿಜ್ಜಳನ ಅಗತ್ಯವಿತ್ತು. ಆದರೆ ಇವರಿಬ್ಬರ ಸಂಬಂಧಗಳು ವಿಘಟನೆ ಉಂಟಾದುದರಿಂದ ಕಲ್ಯಾಣದ ಕ್ರಾಂತಿ ನಡೆದು ಅರಾಜಕತೆ ಸೃಷ್ಟಿಯಾಯಿತು ಎನ್ನುವ ಮಹತ್ವದ ಸಂಗತಿಗಳನ್ನು ನಾಟಕಗಳು ಬಿತ್ತರಿಸುತ್ತವೆ.

## ಕೊನೆ ಟಿಪ್ಪಣಿಗಳು

೦೧. ಬಸವಣ್ಣನವರ ವಚನಗಳು:ಸಾಂಸ್ಕೃತಿಕ ಮುಖಾಮುಖಿ, ಪ್ರಸ್ತಾವನೆ, ಪು.ಸಂ,೧೧., ೨೦೦೪

೦೨. ಕನ್ನಡ ನಾಟಕ ಯಜಮಾನ್ಯ ಸಂಕಥನ, ಡಾ.ಟಿ.ವೆಂಕಟೇಶಮೂರ್ತಿ, ಅಧ್ಯಯನ ಮಂಡಲ, ಬೆಂಗಳೂರು, ಪು.ಸಂ.೨೫೬., ೨೦೦೯

೦೩. ಅದೇ ಪುಸ್ತಕ., ಪು.ಸಂ.೨೫೮

೦೪. ಕಂಬಾರ, ಶಿವರಾತ್ರಿ, ಪು.ಸಂ.೫೦

೦೫. ಮುಖಾಮುಖಿ ಸಮಾಜ ಸಂಸ್ಕೃತಿ ಚಳುವಳಿ, ಬಿ.ಎಂ.ಪುಟ್ಟಯ್ಯ., ಲೇಖನ: ಪ್ರಜಾಪ್ರಭುತ್ವ ಮತ್ತು ಹೋರಾಟಗಳು, ಪು.ಸಂ. ೮೧

# ಅಧ್ಯಾಯ-೦೪

## ವಿವಿಧ ನಾಟಕಗಳಲ್ಲಿ ಬಸವಣ್ಣ ಮತ್ತು ಆತನ ತತ್ವಗಳು ಕಾಣಿಸಿಕೊಂಡ ಬಗೆ

"ಬಸವಣ್ಣನ ಕುರಿತು ಸಮಾಜವು ಕಟ್ಟಿಕೊಂಡಿರುವ ಚಿತ್ರಗಳು ಎರಡು ಸಂಗತಿಗಳನ್ನು ಆಧರಿಸಿವೆ. ಒಂದು ಅವರ ವಚನಗಳನ್ನು, ಎರಡು ಬಸವಣ್ಣನನ್ನು ಕುರಿತು ಇತರರು ಮಂಡಿಸಿರುವ ವ್ಯಾಖ್ಯಾನಗಳನ್ನು, ಈ ವ್ಯಾಖ್ಯಾನಗಳು ಅಲ್ಲಮಪ್ರಭು, ಹರಿಹರ, ಶೂನ್ಯ ಸಂಪಾದನೆಕಾರರಿಂದ ಹಿಡಿದು ಮಂಟೇಸ್ವಾಮಿ ಕಾವ್ಯ, ಹಳಕಟ್ಟಿ, ಎ.ಕೆ.ರಾಮಾನುಜನ್, ಲಂಕೇಶರವರೆಗೆ ಕಳೆದ ೮೦೦ ವರುಷಗಳಿಂದ ಸೃಷ್ಟಿಯಾದವು. ಎಲ್ಲರೂ ತಮ್ಮ-ತಮ್ಮ ತಿಳಿವಿನ ಚಿತ್ರವನ್ನು ರಚಿಸಿದರು. ಹೀಗಾಗಿ ಬಸವಣ್ಣ ಹಾಗೂ ಬಸವ ತತ್ವ ಎಂದರೆ ಏಕರೂಪಿ ಗ್ರಹಿಕೆ ಸಿಗುವುದಿಲ್ಲ, ಬಹುರೂಪಿ ಗ್ರಹಿಕೆ ಸಿಗುತ್ತದೆ ಎಂದು ರಹಮತ್ ತರೀಕೆರೆಯವರು ಹೇಳುವಲ್ಲಿ ಅರ್ಥವಂತಿಕೆಯಿದೆ".[೧]

ಹೀಗಾಗಿ ಬಸವಣ್ಣ-ಬಸವತತ್ವ ಎಂಬ ಕುರಿತು ಏಕರೂಪಿಯಾದ ಚಿತ್ರವನ್ನು ಕಾಣಲು ಸಾಧ್ಯವಿಲ್ಲ. ಬಸವಣ್ಣ ತನ್ನ ತತ್ವವನ್ನು ಸಾಮೂಹಿಕ ಚಳುವಳಿಯಲ್ಲಿ ಪಡೆದುಕೊಂಡವನು. ನಮ್ಮ ಸಮಾಜದ ಮೂಲಭೂತ ಪ್ರಶ್ನೆಗಳಿಗೆ ಕೈಹಾಕಿದ ಚಳುವಳಿಗಾರನಾಗಿದ್ದನು. ಸಮಾಜದಲ್ಲಿ ಬೆಳೆದ ಸಂಗಾತಿಗಳ ಟೀಕೆ-ವಿಮರ್ಶೆಗಳಿಂದ ರೂಪಿಸಲ್ಪಟ್ಟ ವ್ಯಕ್ತಿತ್ವದವನಾಗಿದ್ದವರು. ಬಸವತತ್ವದ ಸ್ವರೂಪ ಎಂದರೆ "ಅಧಿಕಾರಸ್ಥ ಶಕ್ತಿಗಳ ವಿರುದ್ಧ, ಅಧಿಕಾರರಹಿತರ ಪರನಾಗಿ ಮಾಡಿದ ಚಿಂತನೆ ಮತ್ತು ಸಾಮೂಹಿಕ ಹೋರಾಟ" ಎಂದು ಹೇಳಬಹುದು.

ಕೆ.ಮರುಳಸಿದ್ಧಪ್ಪನವರ ಅಭಿಪ್ರಾಯದಂತೆ "ಮೇಲುಜಾತಿ ಮತ್ತು ಮೇಲುವರ್ಗದಿಂದ ಬಂದ ಒಬ್ಬ ವ್ಯಕ್ತಿ ಬಸವಣ್ಣ ಕೆಳಜಾತಿ ಮತ್ತು ಕೆಳವರ್ಗದ ಹಿತಾಸಕ್ತಿಗಳ ಸಲುವಾಗಿ ನಡೆಯುವ ಹೋರಾಟಕ್ಕೆ ನಾಯಕನಾದಾಗ ಆತ ಎಷ್ಟೇ ಪ್ರಾಮಾಣಿಕನಾಗಿದ್ದರೂ ಹೋರಾಟ ಯಶಸ್ವಿಯಾಗಿರುವುದಿಲ್ಲ. ಏಕೆಂದರೆ ಆಳದಲ್ಲಿ ಬಾಲ್ಯದಿಂದಲೂ ಅವನ ವ್ಯಕ್ತಿತ್ವವನ್ನು ರೂಪಿಸಿರುವ ಶಕ್ತಿಗಳು ಒಂದಲ್ಲ ಒಂದು ರೀತಿ ಅವನ ಮೇಲೆ ಹಿಡಿತವನ್ನು ಇರಿಸಿಕೊಂಡಿರುವುದರಿಂದ ಕೆಳಜಾತಿ ಮತ್ತು ವರ್ಗಗಳ ನಿಜವಾದ ಹಿತಾಸಕ್ತಿಗಳ ಸಮಗ್ರ ಕಲ್ಪನೆ ಆತನಿಗೆ ಉಂಟಾಗುವುದೇ ಇಲ್ಲ. ಉದಾಹರಣೆಗೆ 'ಸಂಕ್ರಾಂತಿ' ನಾಟಕದಲ್ಲಿ ಬಿಜ್ಜಳನೆದುರು ಬಸವಣ್ಣ ಅಸಹಾಯಕರಂತೆ ಉಳಿದುಬಿಡುತ್ತಾನೆ".[೨]

ಹಾಗಾಗಿ ಈ ಅಧ್ಯಾಯದಲ್ಲಿ ಪಿ.ಲಂಕೇಶರ 'ಸಂಕ್ರಾಂತಿ', ಎಚ್.ಎಸ್.ಶಿವಪ್ರಕಾಶರ'ಮಹಾಚೈತ್ರ', ಗಿರೀಶ್ ಕಾರ್ನಾಡರ 'ತಲೆದಂಡ', ಕಂಬಾರರ 'ಶಿವರಾತ್ರಿ' ಜೊತೆಗೆ ವಿವಿಧ ನಾಟಕಗಳನ್ನು ಅದರಲ್ಲಿ ಬಸವಣ್ಣ ಮತ್ತು ಆತನ ತತ್ವಗಳನ್ನು ನಾಟಕದಲ್ಲಿ ಹೇಗೆ ತರಲಾಗಿದೆ ಮತ್ತು ಬಳಸಿಕೊಳ್ಳಲಾಗಿದೆ. ಅಲ್ಲದೇ ಅವರ ನಾಟಕಕಾರರ ಧೋರಣೆಗಳೇನು? ಎಂಬುದನ್ನು ಗಮನಿಸುವ ಪ್ರಯತ್ನ ಈ ಅಧ್ಯಾಯದಲ್ಲಿ ನೋಡುವ ಕೆಲಸ ಮಾಡಲಾಗಿದೆ.

ಬಸವತತ್ವ ಎಂದರೆ ಬಸವನ ಸಿದ್ಧಾಂತಗಳು, ಧೋರಣೆಗಳೇನು? ಎಂಬುದನ್ನು ನಾಟಕಕಾರರು ತಮ್ಮ ನಾಟಕಗಳಲ್ಲಿ ಯಾವ ರೀತಿಯಾಗಿ ಯೋಜಿಸಿದ್ದಾರೆ. ಅಲ್ಲದೇ ಯಾವ ರೀತಿಯಾಗಿ ಗ್ರಹಿಸಿದ್ದಾರೆ ಎಂಬುದನ್ನು ಅರಿಯುವ ಪ್ರಯತ್ನ ಈ ನಾಟಕದ ಮೂಲಕ ತಿಳಿಯುವ ಕಾರ್ಯ ಈ ಅಧ್ಯಾಯದಲ್ಲಿ ನೋಡುತ್ತಿದ್ದೇನೆ. ಅಲ್ಲದೇ ನಾಟಕಕಾರರು ಬಸವಣ್ಣ ಮತ್ತು ಬಸವಣ್ಣನ ತತ್ವಗಳನ್ನು ಈ ರೀತಿಯಾಗಿ ಏಕೆ ನೋಡಿದ್ದಾರೆ ಎಂಬುದನ್ನು ಗಮನಿಸುವ ಪ್ರಯತ್ನ ಮಾಡಲಾಗಿದೆ. ನಾಟಕಕಾರರಲ್ಲಿ ಬಸವನ ಕುರಿತು

ಆತನ ತತ್ವಗಳ ಕುರಿತು ಏಕರೂಪಿ ಗ್ರಹಿಕೆ ಸಿಗುವುದಿಲ್ಲ ಕಾರಣ ಬಹುಗ್ರಹಿಕೆ ಸಿಗುತ್ತದೆ. ಕಾರಣ ಅವರವರ ಧೋರಣೆ, ಲೇಖಕರ ದೃಷ್ಟಿಕೋನವನ್ನು ಆಧರಿಸಿರುತ್ತದೆ.

ಸೃಜನಶೀಲ ನಾಟಕಕಾರರು ನೋಡಿರುವ ಬಗೆಯನ್ನು ಮತ್ತು ಸೃಜನೇತರ ನಾಟಕಕಾರರು ಬಸವಣ್ಣ ಮತ್ತು ಬಸವಣ್ಣ ತತ್ವಗಳನ್ನು ನೋಡಿರುವ ಬಗೆ ಬಹಳ ಭಿನ್ನವಾಗಿ ಕಾಣುತ್ತದೆ. ಅದನ್ನೇ ಈ ಅಧ್ಯಾಯದಲ್ಲಿ ವಿವರಿಸಲಾಗಿದೆ. ಮಿರ್ಜಿ ಅಣ್ಣಾರಾಯರು ಶ್ರೀ ಬಸವಣ್ಣನವರ ಜೀವನ ರೇಖೆಯ ಲೇಖನದಲ್ಲಿ ಮಡುಗಟ್ಟಿ ನಿಂತ ಮಲಿನ ನೀರಿನಂತಿರುವ ಭಾರತೀಯ ಸಂಸ್ಕೃತಿಗೆ ಹೊಸ ಪ್ರವಾಹದಂತೆ ಶ್ರೀ ಬಸವಣ್ಣನವರ ಜೀವನ ಗಂಗೆಯು ಧುಮುಕಿತು. ಧರ್ಮ, ವಿಚಾರ, ಕಲೆಗಳ ಜಿಜ್ಞಾಸೆ, ಜಾಗೃತಿಗಳನ್ನು ಅವರು ಹುಟ್ಟಿಸಿದರು ಎಂದು ಅಭಿಪ್ರಾಯಪಡುತ್ತಾರೆ.

ಬಸವಣ್ಣ ಕನ್ನಡ ನಾಡು ಕಂಡಂಥ ಅಭೂತಪೂರ್ವ ದಾರ್ಶನಿಕ. ಸಮಾಜವಾದಿ, ಆರ್ಥಿಕತಜ್ಞ, ವಿಚಾರವಾದಿ, ಧಾರ್ಮಿಕವಾಗಿ ಅಂದಿನ ಸಮಾಜದ ಪ್ರತಿಷ್ಠಿತ ಸ್ತರದಿಂದ ಬಂದವರು ಮತ್ತು ಸಾಮಾಜಿಕವಾಗಿಯೂ ಅಂದಿನ ಆಳುವ ವರ್ಗದ ಪ್ರತಿಷ್ಠಿತ ಸ್ಥಾನದಲ್ಲಿದ್ದವರು. ಅಂದರೆ ಬ್ರಾಹ್ಮಣ ಮತ್ತು ರಾಜಶಾಹಿ ಎರಡೂ ಲಕ್ಷಣಗಳಿಂದ ಮೈಗೂಡಿದ ವ್ಯಕ್ತಿ. ಹರಿಹರನಿಂದ ಪ್ರಾರಂಭವಾಗಿ ಇಂದಿನವರೆಗೂ ಬಸವೇಶ್ವರರ ನಾಯಕತ್ವದಲ್ಲಿ ನಡೆದ ೧೨ನೇ ಶತಮಾನದ ಶರಣ ಚಳುವಳಿಯನ್ನು ವಸ್ತುವಾಗುಳ್ಳ ಅನೇಕ ಕಾವ್ಯ, ಕತೆ, ಕಾದಂಬರಿ, ನಾಟಕಗಳು ಸಾಕಷ್ಟು ಬಂದಿರುವುದೇ ಆ ಚಳುವಳಿಯ ಮಹತ್ವವನ್ನು ಸಾರುತ್ತಿದೆ. "ಬಸವಣ್ಣನವರ ವ್ಯಕ್ತಿತ್ವ ಬಹುಮುಖವಾದುದು. ಒಂದು ಕಡೆ ರಾಜಕೀಯದಲ್ಲಿ ಅತ್ಯುನ್ನತ ಅಧಿಕಾರ, ಇನ್ನೊಂದು ಕಡೆ ಆಧ್ಯಾತ್ಮಿಕ ಮಹಾಸಾಗರ. ಭಕ್ತಿ ಭಂಡಾರಿ ಇದಲ್ಲದೇ ಸಮಾಜದಲ್ಲಿ ಬೇರುಬಿಟ್ಟ ವಿಷಮತೆಯನ್ನು ಕಂಡು ಕೆರಳುವ ಕ್ರಾಂತಿಕಾರಕ ಜನರ ದುಃಖವನ್ನು ಕಂಡು ಕಂಬನಿ ಮಿಡಿಯುವ ಲೋಕ ಸಂಸಾರಿ, ಸ್ವಯಂಪೂರ್ಣ ಸಮಾಜದ ಕನಸ್ಸನ್ನು ಕಂಡ ಕಾಯಕನಿಷ್ಠೆ, ಸಮಾಜ ಸುಧಾರಕ". ಈ ಬಹುಮುಖ ವ್ಯಕ್ತಿತ್ವವುಳ್ಳ ಬಸವಣ್ಣನನ್ನು ಸೃಜನಶೀಲ ನಾಟಕಕಾರರು ಹೇಗೆ ಬಸವಣ್ಣನನ್ನು ಚಿತ್ರಿಸಿದ್ದಾರೆ ಮತ್ತು ನೋಡಿದ್ದಾರೆ ಎಂಬುದನ್ನು ನೋಡುವುದು ಈ ಅಧ್ಯಯನದ ಉದ್ದೇಶವಾಗಿದೆ.

ಪಿ.ಲಂಕೇಶರು 'ಸಂಕ್ರಾಂತಿ' ನಾಟಕದಲ್ಲಿ ಬಸವಣ್ಣನವರ ಮೂಲಕ ಅಂದಿನ ಪ್ರಭುತ್ವ ಮತ್ತು ಇಂದಿನ ರಾಜಕಾರಣಿಗಳಿಗೆ ವಾಸ್ತವದ ಬಗ್ಗೆ ಉತ್ತಮ ಸಲಹೆ ಕೊಡಿಸಿದ್ದಾರೆ. ಬಿಜ್ಜಳ ಬಸವಣ್ಣನೊಂದಿಗೆ ರುದ್ರನ ಅತ್ಯಾಚಾರ ಪ್ರಕರಣದ ಬಗ್ಗೆ ಮಾತನಾಡುವಾಗ ಜನರನ್ನು ಹತೋಟಿಯಲ್ಲಿಡಲು ತಪ್ಪನ್ನು ಹುಡುಕುವುದು ತಮ್ಮ ಕರ್ತವ್ಯವೆಂದು ಹೇಳಲು ಬಸವಣ್ಣ "ಅರಮನೆಯ ಪಲ್ಲಂಗದ ಮೇಲೆ ಒರಗಿ ಸುಂದರ ಕಂಠಗಳ ಧ್ವನಿ ಕೇಳುವವರಿಗೆ ಬೀದಿಯ ಗೋಳು ತಟ್ಟುವುದು ಕಷ್ಟ. ತಮ್ಮ ಕಿರೀಟದ ಒಂದು ವಜ್ರ ಈ ದೇಶದ ಅರ್ಧ ಹೊಟ್ಟೆಗಳಿಗೆ ಅನ್ನ ಕೊಡಬಲ್ಲದು. ಜನ ತಮ್ಮ ಅಂತಃಪುರದ ಹೆಂಗಸರ ಮೂಗುತಿಗಳ ಸೌಂದರ್ಯ ಬಣ್ಣಿಸುತ್ತಾರೆ. ತಮ್ಮ ಹೆಬ್ಬಾಗಿಲು ಕಂಬಗಳನ್ನು ನೆನೆದು ಹಿಗ್ಗುತ್ತಾರೆ. ಆದರೆ ನನಗೆ ಚಳಿಗಾಲದಲ್ಲಿ ಅಂಗೈ ಅಗಲ ಬಟ್ಟೆಯಿಲ್ಲದೇ ನಡುಗುವ ಹಸುಳೆಗಳನ್ನು ನೋಡಿ ಭಯವಾಗುತ್ತದೆ. ತಮ್ಮ ಕನಸುಗಳು ಮೈ ಪಡೆಯಬೇಕಾದದ್ದು ಅಲ್ಲಿ; ಎಲ್ಲರನ್ನು ಮೂಕರನ್ನಾಗಿ ಇರುವುದರಲ್ಲಲ್ಲ ಎಂದು ಪ್ರಭುತ್ವವಾದದ ವೈಭವದ ಬಗ್ಗೆ ಪ್ರಜೆಗಳು ತಮ್ಮ ನೋವನ್ನು ಮರೆತು ಹೆಮ್ಮೆಪಡುತ್ತಾರೆ. ಪ್ರಭುವಾದವನು ತಮ್ಮ ಪ್ರಜೆಗಳ ನೋವಿಗೆ ಸ್ಪಂದಿಸುವುದರಲ್ಲಿ ಬದ್ಧತೆಯನ್ನು ತೋರಬೇಕು. ತನ್ನ ಅನವಶ್ಯಕ ಐಷಾರಾಮಿ ಬದುಕಿಗೆ ಕಡಿವಾಣ ಹಾಕಿ ಅದನ್ನು ಬಡವರಿಗಾಗಿ ವಿನಿಯೋಗಿಸಬೇಕು ಎಂಬುದು ಬಸವಣ್ಣನ ವಾದ. ಈ ರೀತಿಯಾಗಿ 'ಸಂಕ್ರಾಂತಿ' ನಾಟಕದಲ್ಲಿ ಪಿ.ಲಂಕೇಶರು ಚಿತ್ರಿಸುತ್ತಾರೆ. ಧಾರ್ಮಿಕ ಸತ್ತೆಯನ್ನು ಬಸವಣ್ಣ

ಪ್ರತಿನಿಧಿಸಿದರೆ ರಾಜಕೀಯ ಸತ್ತೆಯನ್ನು ಬಿಜ್ಜಳ ಪ್ರತಿನಿಧಿಸುತ್ತಾನೆ. ಲಂಕೇಶರಿಗೆ ಪ್ರೀತಿಪೂರ್ವಕ ಗುಣವಾದ ಮೂರ್ತಿ ಭಂಜಕತ್ವ ಇಲ್ಲಿ ಬಸವಣ್ಣಗೆ ಕನ್ನಡದಲ್ಲಿದ್ದೊಂದು ಅವತಾರೀ ಸ್ವರೂಪವನ್ನು ವಿಧೀಕರಿಸಲು ಸಹಾಯ ಮಾಡಿದೆ. ಹೀಗಾಗಿ ಲಂಕೇಶರ ನಾಟಕದ ಬಸವಣ್ಣ ಬಹಳ ದುರ್ಬಲರೂ, ಅನಿಶ್ಚಿತ ಸ್ವಭಾವದ ಮೂಲವಾಗಿ ಚಿತ್ರಿಕರಿಸುತ್ತಿದ್ದಾರೆ. ಸೃಜನಶೀಲ ನಾಟಕಕಾರರು ಬಸವಣ್ಣನನ್ನು ವೈಚಾರಿಕ ಹಿನ್ನೆಲೆಯಲ್ಲಿ ಅರ್ಥಮಾಡಿಕೊಳ್ಳಲು ಮುಂದಾಗಿದ್ದಾರೆ.

"ಸಂಕ್ರಾಂತಿ ನಾಟಕದಲ್ಲಿ ಶಾಸ್ತ್ರಿಯೊಬ್ಬ ಶರಣ ರುದ್ರನ ಅತ್ಯಾಚಾರ ಸಂಗತಿಯ ಬಗ್ಗೆ ಬಿಜ್ಜಳನಿಗೆ ಚಾಡಿ ಹೇಳಲು ಬಂದು ಬಸವಣ್ಣ ಭಂಡಾರ ವಹಿಸಿಕೊಂಡ ಮೇಲೆ ದೇವಾಲಯಗಳಿಗೆ ಹೊಸ ಕಳೆ ಬಂದಿದೆ ಎಂದು ವ್ಯಂಗ್ಯವಾಗಿ ಹೇಳುತ್ತಾ "ತ್ರಿಪುರಾಂತಕ ದೇವಾಲಯದಲ್ಲಿ ಹದ್ದು ಕಾಗೆಗಳು ಗೂಡು ಕಟ್ಟಿಕೊಂಡಿವೆ. ಬ್ರಹ್ಮ ದೇವಾಲಯದ ಛಾವಣಿ ಛಿದ್ರವಾಗಿದೆ. ನರಸಿಂಹನ ಕಟ್ಟಡ ಶಿಥಿಲಗೊಂಡು ಮುಂದಿನ ಮಳೆಗಾಲದಲ್ಲಿ ನೆಲಸಮವಾಗಲಿದೆ. ಮಲಯವತಿ ದೇವಾಲಯದಲ್ಲಿ ಕಳುವಾದ ಒಡವೆ ಸಿಕ್ಕಿಲ್ಲ. ಅಲ್ಲಿಯ ಅರ್ಚಕನ ಮೇಲೆ ತಪ್ಪು ಹೊರಿಸಲಾಗಿದೆ". ಎಂದು ಚಾಡಿ ಹೇಳುವುದರಿಂದ ಬಸವಣ್ಣನ ದೇವಾಲಯ ನಿರಾಕರಣೆಯ ವಿಚಾರವನ್ನು ನಾಟಕಕಾರರು ಈ ರೀತಿ ಅಭಿವ್ಯಕ್ತಿಸಿದ್ದಾರೆ".[೩]

ಇನ್ನೂ ಇದೇ ನಾಟಕದಲ್ಲಿ ಬಸವಣ್ಣ ಪ್ರಜೆಗಳ ಮೇಲೆ ದೊರೆಗೆ ಇರಬೇಕಾದ ಕಾಳಜಿಯ ಬಗೆಗೆ ಹೇಳುತ್ತಾ "ತನ್ನ ಕೇಶವನ ಮುತ್ತಿನ ಹಾರ ಅನೇಕರ ಕಂಬನಿ ಒರೆಸಬಲ್ಲದು. ಇದನ್ನು ಹಲವೊಮ್ಮೆ ಹೇಳಿದ್ದೇನೆ. ಮತ್ತೆ ಹೇಳುತ್ತಿದ್ದೇನೆ. ಈ ರಾಜ್ಯದ ಪ್ರತಿಯೊಂದು ವಿಗ್ರಹವೂ ಬಡಜನರ ಮೂಕ ವೇದನೆಯ ಘನ ರೂಪವಾಗಿದೆ ಎಂದು ಅದೇ ಬಸವಣ್ಣನವರು ಹೇಳಿದ್ದು, ಇಂದೂ ಈ ಮೌಢ್ಯಾಚರಣೆಗಳು ಬರವಿಲ್ಲದಂತೆ ಸಾಗುತ್ತಿರುವುದು ವಿಪರ್ಯಾಸವಾಗಿದ್ದು ಬಸವಣ್ಣ ಪ್ರಸ್ತುತವಾಗುತ್ತಾರೆ.

'ಸಂಕ್ರಾಂತಿ' ನಾಟಕದಲ್ಲಿ ಪಿ.ಲಂಕೇಶರು ಹರಳಯ್ಯ ಮತ್ತು ಮಧುವರಸರ ಪಾತ್ರಗಳನ್ನು ತರದೇ, ಬಸವಣ್ಣನ ಪ್ರಭಾವಕ್ಕೊಳಗಾಗಿ ಶರಣನಾದ 'ರುದ್ರ' ಮತ್ತು ಬ್ರಾಹ್ಮಣ ಪಂಡಿತರ ಮಗಳು 'ಉಷಾ'ರ ಪ್ರೇಮ ಪ್ರಕರಣವನ್ನು ತಂದಿದ್ದು, ಇದೂ ಪ್ರತಿಲೋಮ ವಿವಾಹವಾಗಿದ್ದು, ಬಸವಣ್ಣನ ದೃಷ್ಟಿಯಲ್ಲಿ ಪ್ರೇಮವಾದರೆ ಬಸವ ವಿರೋಧಿಗಳು ಮತ್ತು ಬಿಜ್ಜಳನ ದೃಷ್ಟಿಯಲ್ಲಿ ಅತ್ಯಾಚಾರ ಪ್ರಕರಣವಾಗುತ್ತದೆ. ರುದ್ರನನ್ನು ಪ್ರೇಮಿಸಿದ್ದ ಉಷಾ ಕೂಡ ತಾನು ಪ್ರೀತಿಸಿದ್ದು 'ರುದ್ರ'ನನ್ನು, "ಶರಣ ರುದ್ರ"ನನ್ನಲ್ಲವೆಂದು, ಇದು ಅತ್ಯಾಚಾರವೆಂದು ಪ್ರತಿಪಾದಿಸುವುದು ವಿಶೇಷವಾಗಿದ್ದು, ಬಸವಣ್ಣ ಇಲ್ಲಿ ಸೋಲೊಪ್ಪಬೇಕಾಗುತ್ತದೆ.

ಇನ್ನೂ ಎಚ್.ಎಸ್.ಶಿವಪ್ರಕಾಶರು 'ಮಹಾಚೈತ್ರ' ನಾಟಕದಲ್ಲಿ ಪ್ರತಿಯೊಂದು ವಿವಾಹದಿಂದಾಗಿ ಕಲ್ಯಾಣ ಕ್ರಾಂತಿಯಾಗಿ ಬಸವಣ್ಣನನ್ನು ಭಂಡಾರಿ ಪಟ್ಟದಿಂದ ಕೆಳಗಿಳಿಸಿರುವಂತೆ, ಬಸವಣ್ಣ ಕ್ರಾಂತಿಯಿಂದ ನೊಂದು ಕಲ್ಯಾಣ ತೊರೆದು ಹೋದಾಗಿನಿಂದ ತಮ್ಮ ಮಹಾಚೈತ್ರ ನಾಟಕವನ್ನು ಪ್ರಾರಂಭಿಸುತ್ತಾರೆ. ಚಂದ್ರಶೆಟ್ಟಿಗೆ ಕಲ್ಯಾಣ ಅಂಧಕಾರದಲ್ಲಿ ಮುಳುಗಿದೆಯೆಲ್ಲಾ ಯಾಕೆ ದೀಪ ಉರಿತಿಲ್ಲಾ? ಎಂದು ಕೇಳಿದಾಗ ಚಂದ್ರಶೆಟ್ಟಿ ಬಸವಣ್ಣ ಕಲ್ಯಾಣ ತೊರೆದುದಾಗಿ ಪ್ರಭುಗಳು ಅವರನ್ನು ಮಹಾಭಂಡಾರಿ ಪದವಿಯಿಂದ ತೆಗೆದುದಾಗಿ ಇದಕ್ಕೆ ಮಾದಿಗರ ಹರಳಯ್ಯನ ಮಗ ಶೀಲವಂತ, ವಿಪ್ರ ಮಧುವರಸರ ಮಗಳು ಮಾದವಿ ಇವರ ಪ್ರತಿಲೋಮ ವಿವಾಹವೇ ಕಾರಣ ಎಂದು ಹೇಳಿ ವರ್ಣಸಂಕರಕ್ಕೂ ಬಸವಣ್ಣನ ಕಲ್ಯಾಣ ನಿರ್ಗಮನಕ್ಕೂ ಸಂಬಂಧ ಮಾಡಿದ್ದಾರೆ.

"ಸಂಕ್ರಾಂತಿ" ನಾಟಕದಲ್ಲಿ ಇನ್ನೂ ಕಲ್ಯಾಣದಲ್ಲಿ ಬಸವನಿದ್ದ.

"ಮಹಾಚೈತ್ರ" ನಾಟಕದಲ್ಲಿ ಬಸವಣ್ಣನಿಲ್ಲ ಕಲ್ಯಾಣದಲ್ಲಿ

"ತಲೆದಂಡ" ನಾಟಕದಲ್ಲಿ ಇದ್ದೂ ಇಲ್ಲವಾಗುತ್ತಾನೆ

"ಶಿವರಾತ್ರಿ" ನಾಟಕದಲ್ಲಿ(ಬಸವಣ್ಣ) ಬಸವ ಭಕ್ತಿ ಅಧಿಕವಾಗಿ ರಾಜಭಕ್ತಿಯೇ ಕ್ಷೀಣವಾಗುವಂತೆ ಬಸವಣ್ಣನಿದ್ದು, ಬಸವಣ್ಣನ ನಿರ್ಗಮನ ನಂತರ ಬಿಜ್ಜಳನು ಅಸಹಾಯಕನಾದುದು ಬಸವ ಶಕ್ತಿಯ ಪ್ರಧಾನತೆಯನ್ನು ಸಮರ್ಥಿಸುತ್ತದೆ.

ಈ ನಾಟಕಗಳಲ್ಲಿ ನಾಟಕಕಾರರು ತಮ್ಮ ದೃಷ್ಟಿಕೋನಗಳಿಗೆ ಅನುಗುಣವಾಗಿ ಬಸವಣ್ಣನನ್ನು ತೋರಿಸಿದ್ದಾರೆ. ಬಸವಣ್ಣನ ಅನುಪಸ್ಥಿತಿಯಲ್ಲಿ ನಡೆಯುವ ನಾಟಕ ಬಸವಣ್ಣನ ಸುತ್ತಲೇ ತಿರುಗುತ್ತದೆ. ಬಸವನ ವಿಚಾರಧಾರೆಗಳಿಂದ ಉಜ್ವಲಿಸಿದ ಕಲ್ಯಾಣ ಅವನ ನಂತರ ಭೀಕರ ಪ್ರಳಯವಾಗಿ ಪ್ರಜ್ವಲಿಸುತ್ತದೆ. ಬಸವಣ್ಣನ ಚಳುವಳಿ ಸೋಲು–ಗೆಲುವು ಎರಡನ್ನೂ ಪಡೆದಂತೆ ಈ ನಾಟಕ ವ್ಯಕ್ತವಾಗುತ್ತದೆ. "ಮಹಾಚೈತ್ರದಲ್ಲಿ ಬಸವನಿಲ್ಲ, ಆದರೆ ಬಸವನ ಅನುಯಾಯಿಗಳಿದ್ದಾರೆ". "ನಾಟಕವನ್ನು ರೂಪಿಸಿರುವ ಅವರ ವೈಚಾರಿಕ ನಿಲುವು ಏನೆಂದರೆ "ಶರಣ ಚಳುವಳಿಗೆ" ಸೋಲಿಲ್ಲ. ಅವರ ದೃಷ್ಟಿಯಲ್ಲಿ ಈ ಚಳುವಳಿ ಮೂಲತಃ ಮೇಲ್ಜಾತಿ–ವರ್ಗಗಳ ಧಾರ್ಮಿಕ ದಬ್ಬಾಳಿಕೆಯ ವಿರುದ್ಧ ಕೆಳಜಾತಿಗಳು ಕೈಗೊಂಡ ಹೋರಾಟ" ಈ ಅನುಯಾಯಿಗಳಿಂದಲೇ ಬಸವ ಕಲ್ಯಾಣದಲ್ಲಿ ಜೀವಂತವಾಗುತ್ತಾ ಹೋಗುತ್ತಾನೆ.

ನಾಟಕಕಾರರು ಹೇಳುವಂತೆ ನಾಟಕವು ಶಿಶಿರ ಹಾಗೂ ಚೈತ್ರಮಾಸಗಳೆರಡರಲ್ಲಿ ನಡೆಯುತ್ತದೆ. ಹಳೆಯದೆಲ್ಲ ಅಳಿದು ಹೊಸ ಚಿಗುರಿಗೆ ನಾಟಕ ನಾಂದಿಯಾಗುತ್ತದೆ. ಇದರಿಂದಾಗಿ ನಾಟಕದ ಆಶಯ ಮತ್ತು ನಿಲುವುಗಳಿಗೆ ಯಾವುದೇ ಧಕ್ಕೆಯಾಗುವುದಿಲ್ಲ. ಇಲ್ಲಿ ಬಿಜ್ಜಳ ಶಿಶಿರನಾಗಿ ಕ್ರೌರ್ಯದ ಮೂಲಕ ಬದುಕನ್ನು ನಾಶಪಡಿಸುವ ವ್ಯಕ್ತಿಯಾಗಿ ಕಂಡರೆ, ಚೈತ್ರವು ಹೊಸ ಬದುಕಿನ ಚಿಗುರಾಗುತ್ತದೆ. ಬಸವಣ್ಣ ೧೨ನೇ ಶತಮಾನದಲ್ಲಿ ಇದ್ದವನು ಆದರೆ ಅವನ ತತ್ವ ವಿಚಾರಗಳು ಎಲ್ಲಾ ಕಾಲಕ್ಕೂ ಜೀವನೋತ್ಸಾಹವನ್ನು ನೀಡುವಂತವಾಗಿದ್ದವು ಎಂಬುದನ್ನು ಈ ನಾಟಕ ತಿಳಿಸುತ್ತದೆ. ನಾಟಕವು ಶರಣರು ಮತ್ತು ಬಿಜ್ಜಳನ ಸಂಘರ್ಷ, ಬಸವನ ಮತ್ತು ವೈದಿಕರ ತತ್ವಗಳ ಸಂಘರ್ಷ ಈ ಎರಡನ್ನು ಕ್ರಿಯಾರೂಪವಾಗಿಸುತ್ತದೆ.

'ಸಂಕ್ರಾಂತಿ'ಯಲ್ಲಿ ಬಸವಣ್ಣನ ಶರಣತತ್ವವನ್ನೇ ವಿರೋಧಿಸಿ ನಿಲ್ಲುವಂತಹ ಕಥಾಹಂದರವನ್ನು ಈ ನಾಟಕ ಹೊಂದಿದೆ. ಸಮಾಜ ಸುಧಾರಣೆ ಮಾಡುವಲ್ಲಿ ಬಸವ ಎಡವಿದಂತೆ ಕಾಣುತ್ತಾನೆ. ವ್ಯವಸ್ಥೆಯ ಒಳಗೆ ತಮ್ಮತನವನ್ನು ಬಿಟ್ಟುಕೊಡಲಾಗದ ದಲಿತರು ಬಸವನಿಂದ ಕಂಗಾಲಾಗುತ್ತಾರೆ. ಹೆಣ್ಣು, ಹೆಂಡದ ಜೊತೆಯಲ್ಲಿ ಬಸವಣ್ಣನ ಶರಣತತ್ವವನ್ನು ಪಾಲಿಸಲು ತಯಾರಾಗುತ್ತಾರೆ. ವ್ಯವಸ್ಥೆಯ ಹಿತ ಕಾಪಾಡಲು ಬಿಜ್ಜಳ ಶರಣ ಬ್ರಾಹ್ಮಣ ನನ್ನದೇ ಎಲ್ಲರ ತಲೆದಂಡ ಕೊಡಲು ಅಸಹಾಯಕನಾಗಿ ಕಾಣುತ್ತಾನೆ.

'ಶಿವರಾತ್ರಿ' ನಾಟಕದಲ್ಲಿ ಕಲ್ಯಾಣದಿಂದ ಕೂಡಲಸಂಗಮಕ್ಕೆ ಹೊರಟು ನಿಂತಿರುವ ಬಸವಣ್ಣ ಆಸೆಗಳೇ ಇಲ್ಲದೇ ಹೋಗಿರುವ ಬಸವಣ್ಣನಾಗಿದ್ದಾನೆ. ಕಲ್ಯಾಣಕ್ಕೆ ಬರುವಾಗ ಮಹತ್ವಾಕಾಂಕ್ಷೆಯಿಂದ ಬರುವ ಬಸವಣ್ಣ ನಿರ್ಗಮಿಸುವಾಗ ಕಲ್ಯಾಣ ಸ್ಮಶಾನಮೌನವಾಗಿರುವುದನ್ನು ಕಾಣುತ್ತಾನೆ. ತಾನು ಕಲ್ಯಾಣವನ್ನು ಬಿಟ್ಟು ಹೊರಡುತ್ತಿದ್ದೇನೆ ಎಂದು ಗೊತ್ತಿದ್ದರೂ ಬಿಜ್ಜಳನನ್ನು ಬದಲಿಸಲು ಪ್ರಯತ್ನಿಸುತ್ತಾನೆ. ಬಸವಣ್ಣ ಅಧಿಕಾರ ಆಕಾಂಕ್ಷೆ ಅಲ್ಲವೆಂದು ನಿರೂಪಿಸಲು ಬಿಜ್ಜಳ ನೀಡಿದಂತಹ "ನಿನ್ನ ರಾಜೀನಾಮೆ ಬಗ್ಗೆ ಮನಃ ಆಲೋಚನೆ ಮಾಡುವ ಅವಕಾಶವಿದೆ ಅಂದುಕೊಂಡಿದ್ದೇನೆ" ಎಂದು ಹೇಳಿದರೂ ಬಸವ ಅದನ್ನು

ನಿರಾಕರಿಸುತ್ತಾನೆ. "ಪ್ರಭುತ್ವಕ್ಕೆ ಅಧಿಕಾರದ ರಕ್ಷಣೆ ಒಂದೇ ಮುಖ್ಯ. ಆದರೆ ಮಹಾಮನೆಯ ಬಸವಣ್ಣ ಶರಣತತ್ವದ ಅಂತರಂಗ ಶುದ್ಧಿ ಬಹಿರಂಗ ಶುದ್ಧಿಯ ಹೊಸ ಸಮಾಜದ ಕನಸು ಭಿತ್ತಿ ಬೆಳೆದಿದ್ದಾನೆ". ಆದ್ದರಿಂದ ಬಸವನಿಗೆ ತನ್ನ ತತ್ವ ಮತ್ತು ಅನುಯಾಯಿಗಳು ಮುಖ್ಯರಾಗುತ್ತಾರೆ. ಅವರ ರಕ್ಷಣೆಗೆ ಬಸವ ಏನನ್ನಾದರೂ ಮಾಡಲು ಸಿದ್ಧನಾಗಿ ಸೂಳೆಸಾವಂತ್ರಿಯ ಮನೆಗೆ ಹೋಗುತ್ತಾನೆ. ವಿಶಾಲ ಮನಸ್ಸಿನ ಬಸವಣ್ಣ ಸೂಳೆಸಾವಂತ್ರಿಯನ್ನು ತನ್ನ ತಾಯಿಯ ಸ್ಥಾನದಲ್ಲಿಟ್ಟು ನೋಡುತ್ತಾನೆ. ಕರ್ತವ್ಯದ ತೊಡಕು ಸಂಬಂಧವನ್ನು ಹಾಳು ಮಾಡುವುದಿಲ್ಲವೆಂಬ ಸತ್ಯ ಬಸವಣ್ಣನ ನಡವಳಿಕೆಯಿಂದ ತಿಳಿದುಬರುತ್ತದೆ. ಬಿಜ್ಜಳನ ನಡವಳಿಕೆಯಿಂದ ಮನನೊಂದಿರುವ ಬಸವ ತಾನು ಆತ್ಮಸ್ಥೈರ್ಯವನ್ನು ಕಳೆದುಕೊಳ್ಳುವವನಲ್ಲ ಎಂಬಂತೆ ಬಿಜ್ಜಳನ ಜೊತೆ ವಾದಕ್ಕಿಳಿಯುತ್ತಾನೆ. ಬಸವನಿಗೆ ಕಲ್ಯಾಣದ ಬದಲಾವಣೆ ಮುಖ್ಯವಾಗುತ್ತದೆ.

ಕಲ್ಯಾಣದ ಜನರಿಗೆ ಮೋಕ್ಷಮಾರ್ಗವನ್ನು ಒದಗಿಸುವುದು ಬಸವಣ್ಣನ ಉದ್ದೇಶ. ಬಸವಣ್ಣ ಎಲ್ಲರಿಗಿಂತಲೂ ಭಿನ್ನವಾಗಿ ನಿಲ್ಲುವುದು ತನ್ನ ತತ್ವ ಮತ್ತು ಆದರ್ಶಗಳಿಂದ. ಬಸವ ಸಾವಂತ್ರಿಯ ಮನೆಗೆ ಬರಲು ಅಂಜುವುದಿಲ್ಲ. ಯಾಕೆಂದರೆ ಬಸವ 'ಕಾಯಕವೇ ಕೈಲಾಸ' ಎಂಬ ತತ್ವಕ್ಕೆ ಒಳಗಾದವ. ಸಾವಂತ್ರಿಯು ಕರ್ತವ್ಯ ನಿಷ್ಠೆಯಿಂದ ಕೂಡಿರುವವಳು ಎಂದು ಅವಳ ಮನೆಗೆ ಬರುತ್ತಾನೆ. ಬಿಜ್ಜಳ ರಾಜನಾಗಿದ್ದರೂ ಅವನ ಮುಂದೆ ಸತ್ಯ ಹೇಳಲು ಬಸವ ಅಂಜುವುದಿಲ್ಲ. ಬಸವಣ್ಣವನಿಗೆ ಶರಣರ ಯೋಗಕ್ಷೇಮ ಮುಖ್ಯವಾಗುತ್ತದೆ. ಅವರ ರಕ್ಷಣೆ ರಾಜನಾದ ಬಿಜ್ಜಳನ ಮೇಲಿದೆ ಎಂದು ಬಿಜ್ಜಳನಿಗೆ ನೆನಪಿಸುತ್ತಾನೆ. ಸಂಗಯ್ಯ ಹೊಕ್ಕ ಮನೆಯೇ ಮಹಾಮನೆ ಎಂದು ಹೇಳುವುದರೊಂದಿಗೆ ಯಾವುದೇ ಕುಲ ಅಥವಾ ಕರ್ತವ್ಯ ಕಡಿಮೆಯಲ್ಲ. ಸ್ವಚ್ಛ ಮನಸ್ಸಿನಿಂದ ಕರ್ತವ್ಯ ಪಾಲಿಸುವವರೆಲ್ಲ ಮನೆಯಲ್ಲಿ ಮಹಾಮನೆ ಎಂದು ಸಾರುತ್ತಾನೆ. ಕಲ್ಯಾಣವನ್ನು ಬಿಟ್ಟು ಹೋಗಬೇಕಾದಾಗಲೂ ಸಹಿತ ಬಸವನಿಗೆ ಕಲ್ಯಾಣದ ರಕ್ಷಣೆ ಮುಖ್ಯವಾಗುತ್ತದೆ. ಕಲ್ಯಾಣವನ್ನು ರಕ್ಷಿಸಿರೆಂದು ಬಿಜ್ಜಳನಿಗೆ ತಿಳಿಸಿ ಬಸವ ತೆರಳುತ್ತಾನೆ.

ಎಚ್.ಎಸ್.ಶಿವಪ್ರಕಾಶರ 'ಮಹಾಚೈತ್ರ' ನಾಟಕದಲ್ಲಿ ಒಂದು ಪಾತ್ರವಾಗಿ ಪಾತ್ರಗಳ ಸಮೂಹದಲ್ಲಿ ರಂಗದ ಮೇಲೆ ಪ್ರವೇಶಿಸದಿದ್ದರೂ ಈ ನಾಟಕದಲ್ಲಿ ಜೀವಜ್ವಾಲೆಯಾಗಿ ಸ್ವಾತಂತ್ರ್ಯ ಮತ್ತು ಸಮಾನತೆಯ ಶಕ್ತಿಯಾಗಿ, ಅರ್ಥವಿಲ್ಲದ ಬದುಕಿಗೆ ಅರ್ಥ ಹುಡುಕಿಕೊಟ್ಟ ದಾರ್ಶನಿಕನಾಗಿ ಒಳನಾಟಕದ ಚೈತ್ರ ಚೇತನವಾಗಿ ಬಸವಣ್ಣನವರು ಮೊದಲನೆಯ ದೃಶ್ಯದಿಂದ ಕೊನೆಯವರೆಗೂ ಹರಿದುಕೊಂಡು ಬರುತ್ತಾರೆ. ಮಹಾಚೈತ್ರದ ಗರ್ಭದಲ್ಲಡಗಿದ ಶಿಶಿರ ಋತುವಿನಲ್ಲಿ ಈ ಆಟ ಪ್ರಾರಂಭವಾಗಿ, ಚೈತ್ರದ ಮುನ್ಸೂಚನೆ ಬರುವವರೆಗೂ ಹಬ್ಬುತ್ತದೆ. ಈ ನಾಟಕದ ಕಾವ್ಯಾತ್ಮಕತೆ ಮತ್ತು ವಿಶಿಷ್ಟ ಕಡೆಯಿಂದ ಬಸವಣ್ಣನವರನ್ನು ಒಟ್ಟು ಸಮುದಾಯದ ರೂಪಕವಾಗಿ ಮಾಡಿ ಈ ಸಮುದಾಯವೇ ನಾಯಕನೇನೋ ಅನ್ನುವ ಹಾಗೆ ಕಲ್ಪಿಸುತ್ತದೆ. ವಿವಿಧ ಸ್ತರಗಳ ಜಾತಿಗಳು ಮತ್ತು ಬುಡಕಟ್ಟುಗಳ ಜನರು ಅರಿತೆಯೋ, ಅರಿಯದೆಯೋ ಇಡೀ ವ್ಯವಸ್ಥೆಯ ನಿರೂಪಕರಾಗಿರುತ್ತಾರೆ. ಮಹಾಚೈತ್ರದಲ್ಲಿ ಚೈತ್ರವೆನ್ನುವುದೇ ಹೊಸ ಚೈತನ್ಯದ, ಹೊಸ ಜೀವನದ ಸಂಕೇತವಾಗಿದೆ. ಬಸವಣ್ಣನ ಕಥನವನ್ನು ಹೊಂದಿದ್ದರೂ, ಬಸವಣ್ಣನ ಪಾತ್ರವು ಪರೋಕ್ಷವಾಗಿದ್ದು ಅವನ ಪಾತ್ರದ ರಚನೆಯಲ್ಲಿ ಇನ್ನಷ್ಟು ಸಂಕೀರ್ಣತೆಯನ್ನು ಪಡೆದಿದೆ. ನಾಟಕದಲ್ಲಿ ಬರುವ ಪಾತ್ರಗಳಿಗಿಂತಲೂ ಬಾರದ ಬಸವಣ್ಣನ ಪಾತ್ರವು ವಿಶಿಷ್ಟವಾಗಿ ಕಳೆಗಟ್ಟುತ್ತದೆ ಮತ್ತು ಹೆಚ್ಚು ಪರಿಣಾಮಕಾರಿಯಾಗಿದೆ. ಆದರೆ ನಮಗದು ಕಾಣದಿದ್ದರಿಂದ ಅವನ ಪಾತ್ರವು ನಮ್ಮ ಊಹೆಗೆ ನಿಲುಕದಷ್ಟು ಪ್ರಬಲವಾಗಿದೆ. ಬಸವಣ್ಣನ ಪ್ರಭಾವಕ್ಕೆ ಒಳಗಾಗಿ ಸಮಾಜದಲ್ಲಿ ಯಾವ ರೀತಿಯ ಬದಲಾವಣೆ ಬಂದಿತು ಮತ್ತು ಯಾವ ರೀತಿಯಲ್ಲಿ ರಾಜಕೀಯ, ಸಾಮಾಜಿಕ, ಧಾರ್ಮಿಕ, ಆರ್ಥಿಕ ವ್ಯವಸ್ಥೆಗಳು ಸ್ಪಂದಿಸಿದವು ಎಂಬುದನ್ನು ಮಹಾಚೈತ್ರದಲ್ಲಿ ಕಾಣಬಹುದು.

'ಶಿವರಾತ್ರಿ' ನಾಟಕದಲ್ಲಿ ಕಂಬಾರರು ಸೂತ್ರದಾರನ ಮೂಲಕ ಹೇಳಿರುವ ಮಾತನ್ನು ಗಮನಿಸಿದರೆ ಬಸವಣ್ಣನ ಪಾತ್ರಚಿತ್ರಣ ಗೊತ್ತಾಗುತ್ತದೆ.

ಮಾಂಡಳಿಕನಾಗಿದ್ದ ಬಿಜ್ಜಳ ಸದ್ದಿಲ್ಲದೇ ಚಾಲುಕ್ಯ
ಸಾಮ್ರಾಜ್ಯವನ್ನು ಆಕ್ರಮಿಸಿ
ಮಂಗಳವೇಡೆಯಿಂದ ಕಲ್ಯಾಣಕ್ಕೆ ಬಂದ,
ಅವನಿಗೂ ಕಲ್ಯಾಣ ಹೊಸದು; ಆಯವ್ಯಯದ ವಿಚಾರದಲ್ಲಿ
ಯಾರ ಮೇಲೂ ನಂಬಿಕೆ ಇರಲಿಲ್ಲ, ಬಿಜ್ಜಳನಿಗೆ
ನಂಬಿಕಸ್ಥನಾದ ಬಸವಣ್ಣ ಕಲ್ಯಾಣಕ್ಕೆ ಬಂದ
ಮರ್ತ್ಯದ ಹಲವಾರು ಸಂಬಂಧಗಳಲ್ಲಿ
ಕೂಡಲಸಂಗಯ್ಯನ ಮೂಲಸಂಬಂಧವನ್ನು
ಬಸವಣ್ಣ ಮರೆಯಲಿಲ್ಲ; ದೇವಲೋಕ
ಮರ್ತ್ಸಲೋಕಗಳನ್ನು ಒಂದು ಮಾಡಲು
ಕರ್ತಾರನ ಕಮ್ಮಟ ನಡೆಸಿದ ಚಿನ್ನದ
ಅರಮನೆಯೆದುರು ಮಣ್ಣಿನ ಮಹಾಮನೆ
ಕಟ್ಟಿದ, ಚಿನ್ನದ ಸುತ್ತ ಆಸೆ ಆಮಿಷಗಳಿರುತ್ತವೆ.
ಮಣ್ಣಿನ ಸುತ್ತ ಮನುಷ್ಯರಿರುತ್ತಾರೆ !
ಅರಮನೆಯ ಕಲ್ಲು ಕುಕ್ಕಿತು

ಈ ನಾಟಕದಲ್ಲಿ ಆರಂಭದಿಂದಲೇ ಬಸವಣ್ಣನವರ ಮನಸ್ಥಿತಿಗಳನ್ನು ಹೀಗೆ ನಿರೂಪಿಸಲಾಗಿದೆ.

ಬಸವಣ್ಣನ ಮಾತು ಮುತ್ತಿನಹಾರ
ಅಲ್ಲಮನ ಮಾತು ಜ್ಯೋರ್ತಿಲಿಂಗ
ಆದರೆ ಬಿಜ್ಜಳನ ಮಾತಿಗೆ ಹತ್ತು ಮನಸ್ಸು
ಹದಿನೆಂಟು ಬುದ್ಧಿ.[೪]

ಈ ನಾಟಕದಲ್ಲಿ ಬಸವಣ್ಣನವರು ಪ್ರಜಾಪ್ರಭುತ್ವದ ನೆಲೆಯನ್ನು ಗುರುತಿಸುತ್ತಾರೆ. ಪ್ರಭುವಿಗೆ ಹೆದರದೇ ನೇರವಾಗಿ ಉತ್ತರ ನೀಡುತಾರೆ. ಈ ಕೆಳಗಿನ ಸಂಭಾಷಣೆಯನ್ನು ಗಮನಿಸಿದರೆ ಅರ್ಥವಾಗುತ್ತದೆ.

ಬಿಜ್ಜಳ: ಹೊಸಗಾಳಿಯ ಹೆಸರಿನಲ್ಲಿ ನೀನು ವರ್ಣಸಂಕರ,
ವರ್ಣಾಶ್ರಮ ಧರ್ಮವನ್ನು ಪ್ರಶ್ನಿಸುವಂಥ ಮದುವೆ
ಮಾಡಬಹುದೇ?

ಬಸವ: ಅದು ವರ್ಣಸಂಕರದ ಮದುವೆಯಲ್ಲ ಪ್ರಭು,
ಅನುಭವ ಮಂಟಪದ ಸಿದ್ಧಾಂತ. ಒಂದು ಕಾಲಕ್ಕೆ
ಮಧುವರಸರು ಬ್ರಾಹ್ಮಣರಾದುದು ನಿಜ, ಹರಳಯ್ಯನವರು

ಶೂದ್ರರಾಗಿದ್ದುದೂ ನಿಜ, ಆದರೆ ಅವರು ಲಿಂಗದೀಕ್ಷೆ
ತಗೊಂಡು ಶಿವಧರ್ಮದವರಾಗಿದ್ದಾರೆ. ಶರಣರಾದ ಮೇಲೆ
ಹರಳಯ್ಯ ಅಂತ್ಯಜನಲ್ಲ, ಮಧುವರಸ ವಿಪ್ರನಲ್ಲ.
ಶರಣರಿಗೆ ಜಾತಿಭೇದವಿಲ್ಲ.

ಆದ್ದರಿಂದ ಅದು ಸ್ವಜಾತಿಯ, ಸ್ವಧರ್ಮದ ವಿವಾಹ, ಜಾತೀಯತೆಯನ್ನು ನಿರ್ನಾಮ ಮಾಡುವ ವೀರ ಸಾಹಸ, ಈವರೆಗಿನ ನಮ್ಮ ಸಿದ್ಧಾಂತ ಬರೀ ವಚನವಾಗಿತ್ತು. ಈಗ ಕೃತಿಯಾಯಿತು. ಈ ನಾಟಕದಲ್ಲಿ ಜಾತೀಯತೆಯನ್ನು ನಿರ್ನಾಮ ಮಾಡುವ ಅಂತರ್ಜಾತಿಗೆ ಪ್ರೋತ್ಸಾಹ ನೀಡುವ ವ್ಯಕ್ತಿಯಾಗಿ ಬಸವಣ್ಣ ಕಂಡುಬರುತ್ತಾನೆ. ಈ ನಾಟಕದಲ್ಲಿ ಕಂಬಾರರು ಬಸವಣ್ಣನನ್ನು ನೋಡುವ ದೃಷ್ಟಿಕೋನವೂ ಇಲ್ಲಿ ಭಿನ್ನವಾಗಿದೆ.

'ತಲೆದಂಡ' ನಾಟಕದಲ್ಲಿ ಬಸವಣ್ಣನು ಭಂಡಾರದ ಮಂತ್ರಿಯಾಗಿ ಹಣ ದುರುಪಯೋಗ ಮಾಡಿರುವನೆಂದು ತನಿಖೆ ನಡೆಯುತ್ತದೆ. ಬಿಜ್ಜಳನಿಗೆ ಬಸವಣ್ಣನ ಬಗ್ಗೆ ಅಪಾರ ನಂಬಿಕೆ ಇದ್ದರೂ ಬಸವಣ್ಣ ತನ್ನ ಪದವಿಗೆ ರಾಜೀನಾಮೆ ನೀಡುತ್ತಾನೆ.ಈ ಮಧ್ಯೆ ಹರಳಯ್ಯ ಮತ್ತು ಮಧುವರಸರ ಮಕ್ಕಳ ವಿವಾಹಕ್ಕೆ ಸಿದ್ಧತೆ, ಬಸವನಿಂದ ಒಲ್ಲದ ಮನಸ್ಸಿನಿಂದ ಒಪ್ಪಿ ಬಿಜ್ಜಳನ ಆಶ್ರಯದಿಂದಲೇ ಮದುವೆ ನಡೆಯುತ್ತದೆ. ಬಸವಣ್ಣನನ್ನು ಪವಾಡ ಪುರುಷನನ್ನಾಗಿಸಲು ಜನರು ಪ್ರಯತ್ನಿಸುತ್ತಾರೆ. ಆದರೆ ಇದಾವುದನ್ನು ಒಪ್ಪದ ಬಸವಣ್ಣನ ನಿಲುವು ಬೇರೆಯಾಗಿದೆ. ಸೋವಿದೇವನನ್ನು ತಂದೆಯ ವಿರುದ್ಧ ಎತ್ತಿಕಟ್ಟುವ ಪಂಡಿತರ ಕುತಂತ್ರದಿಂದ ಬಿಜ್ಜಳನಿಗೆ ಗೃಹ ಬಂಧನವಾಗುತ್ತದೆ. ನಂತರ ಅದಕ್ಷ ಆಡಳಿತ, ಧಾರ್ಮಿಕ ಕಲಹವಾಗುತ್ತದೆ. ಬಸವಣ್ಣ ಕಲ್ಯಾಣವನ್ನು ಬಿಟ್ಟು ಕಂಪಡಿಸಂಗಮಕ್ಕೆ ತೆರಳುತ್ತಾನೆ, ಮಹಾಮನೆ ಮುರಿಯುತ್ತದೆ.

ಈ ನಾಟಕದಲ್ಲಿ ಪ್ರಮುಖವಾಗಿ, ಪ್ರಧಾನವಾಗಿ ಕಾಣಿಸುವ ನೆಲೆಗಳೆಂದರೆ ೧೨ನೇಯ ಶತಮಾನದ ರಾಜಕೀಯ, ಸಾಮಾಜಿಕ ಹಾಗೂ ಧಾರ್ಮಿಕವಾದ ಆಯಾಮಗಳ ಬದಲಾವಣೆಯ ಪ್ರಕ್ರಿಯೆ. ಈ ನಾಟಕಗಳು ಬಸವಣ್ಣನನ್ನು ಚಳುವಳಿಯ ನೇತಾರರನ್ನಾಗಿ ಚಿತ್ರಿಸುವುದರ ಜೊತೆಗೆ, ಬಸವಣ್ಣನ ಅಸ್ಪಷ್ಟ ನಿಲುವನ್ನು, ಬಸವಣ್ಣನ ಹೋರಾಟದ ಮನಸ್ಥಿತಿಯನ್ನು, ಬಸವನಿಲ್ಲದ ಕಲ್ಯಾಣದ ಚರಿತ್ರೆಯನ್ನು ಮತ್ತು ಬಸವ ಚಳುವಳಿಯನ್ನು ಅಂದಿನ ಕೆಳವರ್ಗದ ಜನರು ಹೇಗೆ ಗ್ರಹಿಸಿದರು ಹಾಗೂ ಅದು ಅವರ ಬದುಕಿನಲ್ಲಿ ಮಾಡಿದ ಪರಿಣಾಮ ಇತ್ಯಾದಿ ಅಂಶಗಳ ಬಗೆಗೆ ಹೊಸ ಬೆಳಕು ಮೂಡಿಸುತ್ತದೆ. ಜೊತೆಗೆ ಬಸವಣ್ಣ ಮತ್ತು ಬಿಜ್ಜಳರ ನಡುವೆ ನಿರ್ಮಾಣವಾದ ವೈರುಧ್ಯದ ಸ್ವರೂಪವನ್ನು ಗುರುತಿಸುತ್ತವೆ.

ಬಸವಣ್ಣನವರ "ಕಳಬೇಡ ಕೊಲಬೇಡ ಹುಸಿಯ ನುಡಿಯಲುಬೇಡ" ಎಂಬ ನೈತಿಕ ಮೌಲ್ಯದ ಸಾರವಾದ ಈ ವಚನದ ವಿಮರ್ಶೆಯೇ ಜನಸಾಮಾನ್ಯರ ಪಾತ್ರಗಳ ಮೂಲಕ ನಡೆದಿದೆ. ಪಿ.ಲಂಕೇಶರ 'ಸಂಕ್ರಾಂತಿ' ನಾಟಕದಲ್ಲಿ ಕೆಂಪ ಹೇಳುವ "ಹಂದಿ ಬಂತು, ಗದ್ದೆ ಹೊಗತು ಅಂತ ಇಟ್ಕೊ–ಏನಪ್ಪಾ ಮಾಡ್ತಿ ಆವಾಗ? ಬಂದು ಗಧರ್ ಅವ್ರಏನ್ ಮಾಟ್ತೆ ಅಂತೇನಿ? ಎಲಾ ಹಂದ್ಯಪ್ಪ ಬಸವಣ್ಣ ಕೊಲಬ್ಯಾಡ ಅಂದಾನ ಅಂತೀಯಾ? ನನ್ನ ಬೇಕಾದ್ರೆ ಕೊಲ್ಲು ಅಂತಿಯಾ? ಹೇಳ್ರಲೇ" ಎಂಬಲ್ಲಿ ನಾಟಕಕಾರರು ಬಸವಣ್ಣನವರ ತತ್ವಗಳನ್ನು ಜನಸಾಮಾನ್ಯರು ತಮ್ಮ ನಿತ್ಯಜೀವನದಲ್ಲಿ ಆಚರಣೆಗೆ ತರುವಲ್ಲಿ ಒದಗಬಹುದಾದ ಸಮಸ್ಯೆಯನ್ನು ಬಿಂಬಿಸಿದ್ದಾರೆ. ಅಲ್ಲದೇ ಅದೇ ನಾಟಕದಲ್ಲಿನ ಶರಣ ರುದ್ರನ ತಂದೆಯವರು ಹೇಳುವ "ಹೆಂಡ ಬಿಡು, ಖಂಡ ಬಿಡು, ಹೆಂಗಸು ಬಿಡು–ಏನೇನಲಾ ಬಿಡೋದು? ಇಷ್ಟೊಂದು ಬೇಡಗಳ ನಡುವೆ

ಬದುಕುವುದರ ಸಾಮಾನ್ಯರ ಕಷ್ಟವನ್ನು ನೋಡಬಹುದು ಇಲ್ಲಿ. ಇನ್ನು ಸಾಮಾನ್ಯ ಜನರಿಗೆ ಬಸವಣ್ಣನವರ ಕಲ್ಲಪ್ಪ ಹೇಳುವ "ಮುಕ್ಕಟ ಅಂದರ ಒಂದೆರಡು ತರಬಾರದೇನವಾ ನಾವೂ ಕುಣಿಸಿಕೊಂತ ಕುಂದರತಿದ್ದಿವಿ" ಎಂಬಲ್ಲಿ ಲಿಂಗದ ಪರಿಕಲ್ಪನೆಯೇ ಸಾಮಾನ್ಯ ಜನರ ಜ್ಞಾನದ ಮಿತಿಗೆ ಅರ್ಥವಾಗಿರಲಿಲ್ಲ ಎಂಬುದನ್ನು ನಾಟಕಕಾರರು ಈ ಮೂಲಕ ತೋರಿಸಿದ್ದಾರೆ. ಆದರೆ ಬಸವಣ್ಣನ ತತ್ವಗಳು ಸಾಮಾನ್ಯ ಜನರ ಜೀವನದಲ್ಲಿ ಹಾಸುಹೊಕ್ಕಾಗಿದ್ದವು. "ಶ್ರಮಕ್ಕೆ ತಕ್ಕ ಪ್ರತಿಫಲವನ್ನು ಮಾತ್ರ ಪಡೆಯುವುದು ಬಸವಣ್ಣನವರ ತತ್ವ" ಶಿವರಾತ್ರಿ ನಾಟಕದಲ್ಲೇ ಬರುವ ಅರಮನೆಯ "ರತ್ನದ ಸರವ ಕಳುವಿನ ಪ್ರಸಂಗದಲ್ಲಿ" ಸೂಳೆ ಸಾವಂತ್ರಿ ಮುಗ್ಧ ಸಂಗಯ್ಯನಿಂದ ಪಡೆದ ರತ್ನದ ಸರವನ್ನು ಕಾಮಾಕ್ಷಿಗೆ ನೀಡಲು ಕಾಮಾಕ್ಷಿ ಹೇಳುವ "ಅಮ್ಮಾ ಈ ಸರದ ಬೆಲೆ ನನ್ನ ಬೆಲೆಗಿಂತ ಹೆಚ್ಚು ನನಗಿದು ಬೇಡ" ಎನ್ನುವಲ್ಲಿ ಈ ಸರವನ್ನು ಕದ್ದಂತಹ ದಾಮೊದರ ಬಂದುದ್ದರಿಂದ ಅವನಿಗೆ ಕೊಡುವುದು ಇಲ್ಲಿ ಬಸವಣ್ಣನ ತತ್ವಗಳು, ಸಿದ್ಧಾಂತಗಳು ಜನರಲ್ಲಿ ಬೆರೆತುಹೋಗಿದ್ದವು ಎಂಬುದನ್ನು ಕಂಬಾರರು ಚಿತ್ರಿಸುತ್ತಾರೆ.

ಬಸವಣ್ಣ ಪ್ರಭುತ್ವದೊಂದಿಗಿನ ಸಂಬಂಧವನ್ನು ನೋಡಿದಾಗ ಬಸವಣ್ಣನಿಗೂ–ಬಿಜ್ಜಳನಿಗೂ ವೈಯಕ್ತಿಕವಾಗಿ ಅನೇಕ ಭೇದಗಳಿದ್ದವು. "ಅವರಿಬ್ಬರೂ ಬೇರೆ–ಬೇರೆ ಪಂಥಗಳಿಗೆ ಸೇರಿದವರು. ಬಸವಣ್ಣನ ಪ್ರತಿಯೊಂದು ಕೆಲಸವನ್ನು ಬಿಜ್ಜಳ ಸಹಾನುಭೂತಿಯಿಂದ ನೋಡಲು ಸಾಧ್ಯವಾಗುತ್ತಿರಲಿಲ್ಲ".

'ಸಂಕ್ರಾಂತಿ' ನಾಟಕದಲ್ಲಿ ಬಸವಣ್ಣ ಮಂತ್ರಿ ಸ್ಥಾನ ತೊರೆಯಲು ಪ್ರಮುಖ ಕಾರಣವಾದ ಭಂಡಾರದ ಹಣವನ್ನು ದೋಚಿದ ಆರೋಪದ ಬಗ್ಗೆ ಬಿಜ್ಜಳ ಹೇಳುತ್ತಾ ನಿಮ್ಮ ಶತ್ರುಗಳೆಲ್ಲಾ ನನ್ನಲ್ಲಿ ಬಂದು ನಿಮ್ಮ ಮೇಲೆ ತಮ್ಮ ೨೬ನೇ ಚಾಡಿ ಹೇಳಿದರು" ಎಂದು ಹೇಳುವಲ್ಲಿ ಬಸವಣ್ಣನ ಶತ್ರುಗಳ ಸಂಖ್ಯೆಯು ಹೆಚ್ಚಾಗಿದ್ದುದನ್ನು ಬಿಜ್ಜಳನ ಮೇಲೆ ಪದೇ–ಪದೇ ಒತ್ತಡ ಹಾಕುತ್ತಿದ್ದುದನ್ನು ಕಾಣಬಹುದು.

'ಶಿವರಾತ್ರಿ' ನಾಟಕದಲ್ಲಿ ಬಸವಣ್ಣ–ಬಿಜ್ಜಳರನ್ನು ವೇಶ್ಯೆ ಸಾವಂತ್ರಿಯ ಮನೆಯಲ್ಲಿ ಮುಖಾಮುಖಿಯಾಗಿಸುವುದು ವಿಶೇಷವಾಗಿದೆ. ಪ್ರತಿಲೋಮ ವಿವಾಹವಾದ ಮದುಮಗ ಶೀಲವಂತನಿಗೆ ರಕ್ಷಣೆಕೊಡುವಂತೆ ಬಸವಣ್ಣ ಬಿಜ್ಜಳನಿಗೆ ಕೇಳಿದಾಗ ಬಸವಣ್ಣನಿಗೆ ಮಾತು ಕೊಟ್ಟು ದ್ವಾರಪಾಲಕರನ್ನು ಕರೆಸಿ–"ಈ ಕ್ಷಣವೇ ಹೋಗಿ ಕೊತವಾಲನಿಗೆ ಹೇಳು, ಶೀಲವಂತ ಎಲ್ಲಿದ್ದರಲ್ಲಿ ಅವನಿಗೆ ಬಿಗಿಭದ್ರತೆ ಕೊಡಬೇಕು ತಿಳಿಯಿತೇ? ಎಂದು ತಕ್ಷಣವೇ ಆದೇಶಿಸುವ ಔದಾರ್ಯತೆ ತೋರುವಲ್ಲಿ ಇವರ ನಡುವಿನ ಉತ್ತಮ ಸಂಬಂಧಕ್ಕೆ ಸಾಕ್ಷಿಯಾಗಿ ನಿರೂಪಿತವಾಗಿದೆ. ಶಿವರಾತ್ರಿ ನಾಟಕದಲ್ಲಿ ಬಸವಣ್ಣ ನೇರವಾಗಿ ವ್ಯವಸ್ಥೆಯನ್ನು ಪ್ರತಿಭಟಿಸಿದ ವ್ಯಕ್ತಿಯಾಗಿ ಕಾಣುತ್ತಾನೆ.

ಧರ್ಮಬಾಹಿರರೆಂದು ಸಮಾಜದಿಂದ ನಿರಾಕರಣೆಗೊಳಗಾಗಿರುವವರಿಗೆ ಹೊಸ ಧರ್ಮ ದೇವರನ್ನು ಕೊಟ್ಟು ನೇರ ಕೈಲಾಸಕ್ಕೆ ಕರೆದೊಯ್ಯುತ್ತೀರೋ? ಎಂಬ ಬಿಜ್ಜಳನ ಪ್ರಶ್ನೆಗೆ ಬಸವಣ್ಣ "ಅದನ್ನು ನಿಮ್ಮ ವ್ಯವಸ್ಥೆಯು ಮಾಡಲಾರದ ಪ್ರಭು, ತಮ್ಮ ರಾಜ್ಯದಲ್ಲಿ ಧರ್ಮವಿದೆ. ಕೆಲವೇ ಪ್ರತಿಷ್ಠಿತರಿಗೆ ಅದನ್ನವರು ಬಡಜನಗಳ ಮೇಲೆ ಹೇರುತ್ತಿದ್ದಾರೆ" ಎಂದು ಬಸವಣ್ಣನು ನೇರವಾಗಿ ಪ್ರಶ್ನಿಸುವ ವ್ಯಕ್ತಿಯಾಗಿ ಈ ನಾಟಕದಲ್ಲಿ ಕಂಬಾರರು ಚಿತ್ರಿಸಿದ್ದಾರೆ.

ಗಿರೀಶ್ ಕಾರ್ನಾಡರು ಬಸವಣ್ಣನ "ಸ್ನೇಹಗುಣವನ್ನು ಮತ್ತು ಒಬ್ಬ ಶ್ರೇಷ್ಠ ಕ್ರಾಂತಿವಾದಿಯಲ್ಲಿರಬೇಕಾದ ಎಲ್ಲಾ ಗುಣಗಳನ್ನು ಬಸವಣ್ಣನವರಲ್ಲಿ ಕಂಡಿದ್ದಾರೆ". ಪ್ರಭುತ್ವವನ್ನು ನೇರವಾಗಿ

ಪ್ರಶ್ನಿಸಿ ಜನಸಾಮಾನ್ಯರ ಹಿತವನ್ನು ಕಾಪಾಡುವುದೇ ಪ್ರಭುತ್ವದ ಹೊಣೆಗಾರಿಕೆ ಎಂದು ಸಾರಿದ್ದು ಇಂದಿಗೂ ರಾಜಕಾರಣಿಗೆ ನೀಡಬೇಕಾದ ಸಲಹೆಯಾಗಿದೆ.

'ತಲೆದಂಡ' ನಾಟಕದಲ್ಲಿ ಸಂಸ್ಕೃತದಲ್ಲಿ ಮಂಚಣ್ಣಕ್ರಮಿತ ರಚಿಸಿರೋ ಬಿರುದಾವಳಿಗಳ ಬಗ್ಗೆ ಬಸವಣ್ಣ ನನ್ನ ಕೇಳಿದಾಗ ಬಸವಣ್ಣ "ಒಂದು ಹೊಸ ಶಾಸನ ಅದರೊಳಗೆ ಮರೆಸಲಿಕ್ಕೆಂತ ಒಂದು ಹೊಸ ಯುದ್ಧ, ಐನೂರು ವೀರಗಲ್ಲು, ಸಾವಿರ ಹಸಿ ರಂಡೆ ಮುಂಡೆಯರ ಹಲುಬು ಮತ್ತು ಪರಾಕ್ರಮದ ವೆಚ್ಚಕ್ಕಂತ ಹೊಸತೆರಿಗೆ, ಬಿಟ್ಟಿ, ಕೊಟ್ಟಣ, ಗೋಳು ಎಂದು ರಾಜ್ಯಸ್ಥಿತಿಗೆ ರಾಜರ ಬಿರುದಾವಳಿ, ಶಾಸನಗಳಿಂದಾಗುವ ನಷ್ಟದ ಬಗ್ಗೆ ಹೇಳುವುದು. ಮಂಚಣ್ಣ ಕ್ರಮಿತ ನಾವು 'ಮಹಾರಾಜರ ಪ್ರಜೆಗಳು' ಎಂದಾಗ "ನಾವು ಮಹಾರಾಜರ ಅಧಿಕಾರಿಗಳು ಮಹಾರಾಜರ ಪ್ರಜೆಗಳ ಗೋಳನ್ನು ಮಹಾರಾಜರ ಕಿವಿಯಲ್ಲಿ ಹಾಕೋದು ನಮ್ಮ ಕರ್ತವ್ಯ' ಎಂದು ಪ್ರಭುಗಳಾದವರಿಗೆ ಪ್ರಜೆಗಳ ಮೇಲಿರಬೇಕಾದ ಕಾಳಜಿಯನ್ನು ತಿಳಿಸುವ ವ್ಯಕ್ತಿಯಾಗಿ ಗಿರೀಶ್ ಕಾರ್ನಾಡರು ಚಿತ್ರಿಸುತ್ತಾರೆ.

'ತಲೆದಂಡ'ದಲ್ಲಿನ ಬಸವಣ್ಣನ ಪವಾಡದ ವಿಷಯದಲ್ಲಿನ ಸಂಕೋಚ ನೋಡಬಹುದಾಗಿದೆ. ಸೋವಿದೇವ ತಾನಿಲ್ಲದಾಗ ಭಂಡಾರವನ್ನು ಪ್ರವೇಶಿಸಿ ಪರೀಕ್ಷೆ ಮಾಡಿಸಿದ್ದರ ಬಗ್ಗೆ ವಿಚಾರಿಸಲು ಅರಮನೆಗೆ ಬಂದು ವಿಚಾರಿಸುತ್ತಿರಲು, ಹೊರಗೆ ನೆರೆದಿದ್ದವರನ್ನು ಒಳಕರೆಸಿದಾಗ ಬಂದ ಹೆಂಗಸು "ಲಗ್ನ ಆಗಿ ನಾಕು ವರ್ಷ ಆತು, ಹುಟ್ಟಿದ ಕೂಸೆಲ್ಲಾ ಹೊಕ್ಕಾವು, ಒಂದರೇ ಉಳಿಸಿಕೊಡೋ ಬಸವಣ್ಣ" ಎಂದು ಕೇಳಿದಾಗ ಬಸವಣ್ಣ ಗಾಬರಿಯಾದಾಗ ನಿನಗೆ ಗೊತ್ತಿಲ್ಲದಿರುವುದು ಏನಿದ್ಯೋ ಬಸವಣ್ಣ, ಪವಾಡ ಮಾಡಿದವ ನೀನು. "ನೀ ಮಾಮನಿ ವೆಚ್ಚಕ್ಕಂತ ಬೊಕ್ಕಸಾದಾಗಿಂದ ರೊಕ್ಕ ಇಸಗೊಂಡಿದ್ದೀಯಂತ...... ಐವತ್ತು ಸಾವಿರ ಹೊನ್ನು, ಅದನ್ನು ಶಿವ ಮತ್ತ ತುಂಬಿ ಕೊಟ್ಟನಂತ, ಸಣ್ಣ ಧಣೇರು ಲೆಕ್ಕ ಏಣಿಸಿದರೆ ಒಂದು ದುಗ್ಗಾಣಿ ಕಮ್ಮಿಯಿದಿದ್ದಿಲ್ಲಂತ!" ಎಂದು ಭಾವುಕಳಾಗಿ ಮಾತನಾಡಿದಾಗ ಸಂಕೋಚಗೊಂಡು ಬಸವಣ್ಣ ನಾ ಬೊಕ್ಕಸದಾಗಿಂದ ಹೊನ್ನು ಕದೀತೀನಿ ಅಂತ ನೀವೆಲ್ಲಾ ನಂಬುತ್ತೀರಾ? ಎಂದು ಕೇಳಿದಾಗಲೂ ಮುದುಕ ಹಾಂಗಲ್ಲೋ, ಪ್ರಸಾದಕ್ಕ, ದಾಸೋಹಕ್ಕ, ಶರಣರ ಸಲುವಾಗಿ ಎನ್ನಲು ಬಸವಣ್ಣನಿಗೆ ಈ ಜನ ತನ್ನನ್ನು ಪವಾಡಮರುಷರನ್ನಾಗಿ ಮಾಡಲು ಕಳ್ಳ ಎನ್ನಲು ಸಿದ್ಧರಿದ್ದಾರಲ್ಲಾ? ಎಂದುಕೊಳ್ಳುವುದರ ಜೊತೆಗೆ ಬಿಜ್ಜಳ ಕೂಡ ಅದನ್ನು ಸಮರ್ಥಿಸುತ್ತಾನೆ. "ಶಿವರಾತ್ರಿ ನಾಟಕದಲ್ಲೂ ಬಸವಣ್ಣನು ಪವಾಡಗಳ ವಿಷಯದಲ್ಲಿ ಬೇಸರವನ್ನು ವ್ಯಕ್ತಪಡಿಸುತ್ತಾರೆ". ಇಂಥ ಪವಾಡ ಮಾಡಿ–ಮಾಡಿ ನಾನೂ ನಗೆಮಾರಿ ತಂದೆಯಾಗಿದ್ದೇನೆ ಎಲ್ಲಿ ಯಾವಾಗ ಯಾವ ಪವಾಡ ಮಾಡ್ತೀನೋ ತಿಳಿದಾಂಗ ಆಗಿದೆ ದಿನಾ ನನ್ನ ಹೆಸರಿಗೆ ಪವಾಡಗಳ ಕಟ್ಟುತ್ತಾರೆ" ಎಂದು ಈ ಜನರ ಭಾವುಕತೆಗೆ ನಗೆಪಾಟಲಾಗಿರುವುದಕ್ಕೆ ಬೇಸರವಾಗಿರುವಂತೆ ನಾಟಕಕಾರರು ವಿಶ್ಲೇಷಿಸುತ್ತಾರೆ.

ವರ್ಣವ್ಯವಸ್ಥೆಯನ್ನು ನಿರ್ಮೂಲನ ಮಾಡುವಲ್ಲಿ ತಂದ ಬದಲಾವಣೆಗಳನ್ನು ನೋಡುವುದಾದರೆ 'ಮಹಾಚೈತ್ರ' ನಾಟದಲ್ಲಿ ಬಸವಣ್ಣನ ನಿರ್ಗಮನದ ನಂತರ ಬಸವಣ್ಣನ ಕಾಲದಲ್ಲಿನ ಸ್ಥಿತಿಗತಿಯ ಬಗ್ಗೆ ಕ್ರಮಿಸಿ ಮುಕುಂದಭಟ್ಟರು ಮಂಗಳಗುಪ್ತರು ಹೇಳುವ "ಭಕ್ತಿಯ ನೆಪದಲ್ಲಿ ಮಹಾಮನೆಯನ್ನು ಕಟ್ಟಿ ನಗರದ ಅಂತ್ಯಯೋನಿಜರನ್ನು ಕೊಬ್ಬಿಸಿಬಿಟ್ಟ, ಹಿರಿಯರ ಅಧಿಕಾರಿಗಳೂ ಕಂಡಾಗ ವಂದಿಸೋದನ್ನು ಕೀಳುಜಾತಿಯವರು ನಿಲ್ಲಿಸಿ ಎಷ್ಟೋ ವರ್ಷಗಳು ಕಳೆದವು. ಇನ್ನೂ ನಾಲ್ಕು ದಿವಸ ಅವನು ಇಲ್ಲೇನಾದ್ರೂ ಇದ್ದಿದ್ರೆ ವಣಿಕರು, ಅಗ್ರಹಾರದೋರು ಆಯಗಾರರಿಗೆ ಕರಕೊಡೋ ಹಾಗೆ ಮಾಡ್ತಿದ್ದ" ಎಂದ

ಮಾತುಗಳಿಂದ ಬಸವಣ್ಣ ಕಾರ್ಯಾಚರಣೆಗೆ ತಂದಿದ್ದ ಈ ಹೊಸ ಬದಲಾವಣೆಯೇ ವರ್ಣವ್ಯವಸ್ಥೆಯ ವಿರುದ್ಧ ಸಮಸಮಾಜ ಕಟ್ಟಲು ಮುಂದಾದದ್ದು ತಿಳಿಯುತ್ತದೆ.

'ತಲೆದಂಡ' ನಾಟಕದಲ್ಲಿ ಬಿಜ್ಜಳ ಬಸವಣ್ಣನ ಬಗ್ಗೆ ತನ್ನ ಪತ್ನಿ ರಂಭಾವತಿಯೊಂದಿಗೆ ಮಾತನಾಡುತ್ತಾ ತಾನು ಕಳಚೂರ್ಯ ಭುಜಬಲ ಚಕ್ರವರ್ತಿ. ಆದರೆ ನನ್ನ ಜಾತಿಯಾವುದು ಕಲಚೂರ್ಯ. ಕಟ್ಟಚೂರಿ ಅಂದರೆ ಕ್ಷೌರಿಕ! ನನ್ನ ಜಾತಿ ಕ್ಷೌರಿಕನದು...... ಜಾತಿ ಅಂದರ ಮೈತೊಗಲಿದ್ದಾಂಗ ಅದನ್ನು ಸುಲಿದು ಕಿತ್ತು ಒಕ್ಕೊಟ್ಟರೂ ಹೊಸ ತೊಗಲು ಬಂದ ಗಳಿಗೆಗೆ ಎಲ್ಲರ ಕಣ್ಣಿಗೆ ಬೀಳೋದು ಅದಾ..... ಅದ ಹಳೆ ಜಾತಿ. ನನ್ನ ಈ ಅರವತ್ತೆರಡು ವರ್ಷದ ವಯಸ್ಸಿನ್ಯಾಗ ಜಾತಿಯ ಹಂಗಿಲ್ಲದ ನನ್ನನ್ನು ಕಣ್ಣಾಗ ಕಣ್ಣಿಟ್ಟ ನೋಡಿದವ ಅಂದರ ಬಸವಣ್ಣ..... ಜಾತಿಪದ್ಧತಿಯನ್ನು ಈ ನಾಡಿನಿಂದ ಸವರಿ ಬಿಡತಿನಿ ಅನ್ನದಾನ, ವರ್ಣಾಶ್ರಮ ಧರ್ಮ ಬೇರು ಸಹಿತ ಕಿತ್ತು ಹಾಕತಿನಿ ಅನ್ನತಾನ, ಎಂಥಾ ಕನಸದು ಎಂಥಾ ಎದೆಗಾರಿಕೆ! ಎಂದು ಎದೆತುಂಬಿ ಪ್ರಶಂಸಿಸುವಲ್ಲಿ ಬಸವಣ್ಣನ ಧ್ಯೇಯ ಮತ್ತು ತತ್ವವನ್ನು ಒಪ್ಪಿಕೊಳ್ಳುತ್ತಾನೆ.

'ಶಿವರಾತ್ರಿ' ನಾಟಕದಲ್ಲಿ ಬಸವಣ್ಣನು ಬಿಜ್ಜಳನ ರಾಜ್ಯದ ಪದ್ಧತಿಯ ಕುರಿತು ಪ್ರತಿಕ್ರಿಯಿಸುತ್ತಾ "ನಿಮ್ಮ ಪದ್ಧತಿಯ ದೇವರು ಕೆಲವರನ್ನು ದೂರ ಇಡುತ್ತದೆ. ನನ್ನ ಪ್ರಕಾರ ಅದು ದೇವರಲ್ಲ, ನನ್ನ ದೇವರೇ ಆಗಿದ್ದರೆ ಇಬ್ಬರನ್ನು ಮುಟ್ಟಬೇಕು. ಇಲ್ಲಾ ಇಬ್ಬರನ್ನು ದೂರ ಇಡಬೇಕು. ಅಂಥ ದೇವರು ನನಗೆ ಬೇಕು. ಇಲ್ಲದಿದ್ದರೆ ಆ ದೇವರೇ ನನಗೆ ಬೇಡ" ಎಂಬ ವರ್ಣಾಶ್ರಮ ವ್ಯವಸ್ಥೆಗೆ ಪೂರಕವಾಗಿದ್ದ ದೇವರನ್ನೇ ನಿರಾಕರಿಸಿದ ಬಸವಣ್ಣ ಹೊಸ ಆಂದೋಲನದ ಹರಿಕಾರನಾಗುವುದನ್ನು ನೋಡಬಹುದು. ಬಸವಣ್ಣನವರ ಪಾತ್ರ ಈ ನಾಟಕದಲ್ಲಿ ಬಹುಮುಖ ವ್ಯಕ್ತಿತ್ವದ ನೆಲೆಯಲ್ಲಿ ಚಿತ್ರಣಗೊಂಡಿದ್ದು, ಇಂದಿನ ಯುಗಕ್ಕೂ ಬಸವಣ್ಣನ ತತ್ವಗಳು, ಸಿದ್ಧಾಂತಗಳು, ಆದರ್ಶಗಳು ಪ್ರಸ್ತುತವಾಗುವುವು. ೧೨ನೇ ಶತಮಾನದ ಒಬ್ಬ ವ್ಯಕ್ತಿಯ ತತ್ವಾದರ್ಶಗಳು ೨೧ನೇ ಶತಮಾನಕ್ಕೂ ಪ್ರಸ್ತುತವಾಗುತ್ತವೆ ಎಂದರೆ ಆತ ಎಂಥ ವಾಸ್ತವ ಜ್ಞಾನದ ಪ್ರಾಯೋಗಿಕ ವ್ಯಕ್ತಿ ಎಂಬುದನ್ನು ತಿಳಿಸುತ್ತದೆ. ಬಿಜ್ಜಳನ ಪ್ರಭುತ್ವದಲ್ಲಿ ಬಸವಣ್ಣ ಮಂತ್ರಿಯಾಗಿ ಪ್ರಜಾಪ್ರಭುತ್ವವನ್ನು ಪ್ರತಿಪಾದಿಸಿದರು. 'ಅಹಿಂಸೆ, ಸರ್ವಧರ್ಮಸಮಾನ ಮನೋಭಾವ, ಪ್ರಜಾಪ್ರಭುತ್ವ- ಇವೆಲ್ಲ ತತ್ವಗಳಾಗಿರೋ ಹಾಗೆ ಗಾಂಧೀಜಿ ತತ್ವಗಳು ಆಗಿದ್ದವು'. ರಾಜಕೀಯವಾಗಿ ಅಂದಿನ ಬಸವಣ್ಣನ ತತ್ವಗಳು ಗಾಂಧೀಜಿಗೂ ಮಾದರಿಯಾಗಿ ಕಂಡದ್ದು ವಿಶೇಷ, ಇಂದಿಗೂ ಅವರ ವಿಚಾರಧಾರೆಗಳು, ತತ್ವಗಳು, ಆಶಯಗಳು ಪ್ರಸ್ತುತವಾಗುವುದರಲ್ಲಿ ಮಹತ್ವವಿದೆ.

ನಾಡಿನ ಪ್ರಸಿದ್ಧ ವಿಮರ್ಶಕರಲ್ಲೊಬ್ಬರಾದ ಪ್ರೊ.ಕಿ.ರಂ.ನಾಗರಾಜ ಅವರು ಕೃತಿಯ ಮುನ್ನುಡಿಯಲ್ಲಿ "ಬಸವನಿಲ್ಲ ಕಲ್ಯಾಣದಲ್ಲಿ" ಎಂಬುದಾಗಿ ಅಭಿಪ್ರಾಯಪಡುತ್ತಾ ನಾಟಕದ ಒಟ್ಟಾರೆ ಸಾರಾಂಶವನ್ನು ಮತ್ತು ಅದರ ಸೋಲು—ಗೆಲುವುಗಳನ್ನು ಕಟ್ಟಿಕೊಟ್ಟಿದ್ದಾರೆ. ಇದನ್ನು ಗ್ರಹಿಸದೇ ನಾಟಕದ ಒಳಗಡೆ ಪ್ರವೇಶಿಕೆ ಮಾಡಿದ ಯಾವ ಸಹೃದಯನಿಗೂ ಸಹ ಗೊಂದಲ, ತಿರಸ್ಕಾರ, ಸಂಶಯ ವಚನ ಚಳುವಳಿಯ ಹಾಗೂ ಲೇಖಕರ ಬಗೆಗೆ ಮೂಡುವುದು ಸಹಜ. ಬಸವಣ್ಣನ ನೇತೃತ್ವದಲ್ಲಿ ನಡೆದ ಕಲ್ಯಾಣ ಚಳುವಳಿಯು ಹಿಡಿದ ದಾರಿಯನ್ನು ಮತ್ತು ಪಡೆದ ಸೋಲು-ಗೆಲುವುಗಳನ್ನು ನಾಟಕದ ಉದ್ದಕ್ಕೂ ಗುರುತಿಸುವುದು. ಈ ನಿಟ್ಟಿನಲ್ಲಿ ತನ್ನ ನಿಲುವುಗಳನ್ನು ಮುರಿದ ಬಿಜ್ಜಳನ ಹಾಗೂ ಪುರೋಹಿತಶಾಹಿ ರಾಜಕಾರಣಿಗಳಿಂದ ಬೇಸತ್ತು ಕಲ್ಯಾಣದಿಂದ ಕೂಡಲಸಂಗಮಕ್ಕೆ ಹೊರಟುಹೋಗಿದ್ದಾನೆ; ಆನಂತರದಲ್ಲಿ ಕಲ್ಯಾಣದಲ್ಲಿ ಏನಾಯಿತು ಎಂಬುದನ್ನು ಇಲ್ಲಿ ಲೇಖಕರು ಕಟ್ಟಿಕೊಟ್ಟಿದ್ದಾರೆ" ಎಂದು ಅಭಿಪ್ರಾಯಪಡುತ್ತಾರೆ.

ಇಡೀ ನಾಟಕದ ಚಿತ್ರಣವಿರುವುದು ಬಸವಣ್ಣ ಕೂಡಲಸಂಗಮಕ್ಕೆ ಹೋದ ನಂತರ ನಡೆಯುವ ಕಥಾವಸ್ತು. ಇಲ್ಲಿ ಬಸವಣ್ಣ ನೇರವಾಗಿ ಕಾಣಿಸಿಕೊಳ್ಳುವುದಿಲ್ಲವಾದರೂ ಸಹ ಆತನ ವೃತ್ತಾಂತ ನಾಟಕದ ಉದ್ದಕ್ಕೂ ಹರಡಿಕೊಂಡಿದೆ. ಬಸವಣ್ಣನ ಅವಸಾನದ ದೃಶ್ಯವನ್ನು ಎರಡನೇ ಅಂಕದ ಎರಡನೇ ದೃಶ್ಯದಲ್ಲಿ ಬಹುರೂಪಿ ಚೌಡಯ್ಯ, ಕಲಕೇತಯ್ಯ, ನಗೆಯ ಮಾರಿತಂದೆ ಈ ಮೂರು ಜನ ಶರಣರು ಒಳ ನಾಟಕದಲ್ಲಿ ನೀಲಾಂಬಿಕೆಗೆ ಆಡಿ ತೋರಿಸುತ್ತಾರೆ. ಈ ನಾಟಕದಲ್ಲಿ ಬಿಜ್ಜಳನಿಗಿಂತ ಮುಂಚೆಯೇ ಅಂದರೆ ಕಲ್ಯಾಣ ಕ್ರಾಂತಿಗಿಂತ ಮುಂಚೆಯೇ ಐಕ್ಯವಾಗಿದ್ದಾನೆ.

ಬಸವಣ್ಣನ ತತ್ವವನ್ನು ಎಚ್.ಎಸ್.ಶಿವಪ್ರಕಾಶರರು 'ಮಹಾಚೈತ್ರ'ದ ನಾಟಕದಲ್ಲಿ ಈ ರೀತಿಯಾಗಿ ತೋರಿಸಿದ್ದಾರೆ. ಇಲ್ಲಿ ಬಸವಣ್ಣನ ತತ್ವಗಳನ್ನು ಅಳವಡಿಸಿಕೊಂಡು ಆ ನೆಲೆಯಲ್ಲಿ ನಡೆಯಬೇಕಾದ ಶರಣರಲ್ಲಿಯೇ ಒಡಕುಮೂಡಿ ಬಸವಣ್ಣನು ಕಟ್ಟಿದ ಹೊಡೆದು ಆಳುವ ನೀತಿ-ರೀತಿಗಳನ್ನು ನೋಡಬಹುದು.

"ಚನ್ನಬಸವಣ್ಣ: ನಿಮ್ಮ ಆದೇಶ ಅರ್ಥವಾಗುತ್ತೆ ಮಾಚಿದೇವರೆ, ಈ ಪ್ರಪಂಚ ಒಂದು ಘೋರ ಕಾನನ. ಕ್ರೂರ ಮೃಗಗಳಿಂದ ಭಯಂಕರವಾಗಿದೆ. ಆದರೂ ಅಹಿಂಸೆ ನಮ್ಮ ಪರಮ ಧರ್ಮವಾಗಬೇಕು, ಇಲ್ಲವಾದರೆ ಬಸವೋಕ್ತಿಯ ಉಲ್ಲಂಘನೆಯಾಗುತ್ತದೆ.

ಮಾಚಿದೇವ: ನಾವು ಬಸವಣ್ಣನವರ ಬಿಟ್ಟು ಆಳುಗಳಲ್ಲ.

ಚನ್ನಬಸವಣ್ಣ: ಬಸವಣ್ಣನೋರು ನಮ್ಮ ಅಗ್ರನಾಯಕರು.

ಮಾಚಿದೇವ: ನಮಗೆ ಅದು ಮುಖ್ಯವಲ್ಲ. ಈ ಮಹಾಮನೆಯನ್ನು ಕಟ್ಟಿದ್ದು ನಾವು. ನಾವೇ ಒಂದು ಕಿರುದಾರಿ ಹುಡುಕುತ್ತಾ ಇದ್ದೆವು. ನಮ್ಮಂತೋರ ಗುಂಡಿ ಮೇಲೆ ಕಟ್ಟಿದ ದೇವಸ್ಥಾನ, ಮಠಗಳು, ಕಳುವಾದ ನಮ್ಮ ಕನಸಿನ ಸೂರ್ಯನ ಹಾಗೆ ಹೊಳೆಯೋ ಅರಮನೆ, ಇವೆಲ್ಲದರ ಆಚೆ ಒಂದು ಕಿರುದಾರಿ. ಆ ದಾರಿ ಹಿಡಿದು ಮುಂದೆ ಬಂದಾಗ ನಾವು ಈ ಜಾತಿ ಮದುವೆ ಮನೆಗೆ ತಲುಪಿದೆವು".[೫]

ಎಂದು ಮಾಚಿದೇವ ಬಸವಣ್ಣನೊಂದಿಗೆ ಚರ್ಚಿಸುವಾಗ ಇಲ್ಲಿ ಬಸವಣ್ಣನ ತತ್ವಗಳನ್ನು ಕಡೆಗಣಿಸಿ, ಬಸವಣ್ಣನ ತತ್ವಗಳಿಗೆ ಪ್ರಾಧಾನ್ಯತೆ ಕೊಡದೆ ನಾವೇನು ಬಸವಣ್ಣನೋರ ಬಿಟ್ಟಿ ಆಳುಗಳಲ್ಲ ಎಂದು ಒಬ್ಬ ಹಿರಿಯ ಶರಣನಿಂದ ಹೇಳಿಸಿರುವುದು ಸರಿ ಎನಿಸುವುದಿಲ್ಲ. ಮಹಾಮನೆಯಲ್ಲಿನ ಪ್ರತಿಯೊಂದು ಕೆಲಸಕ್ಕೂ ಅಗ್ರಗಣ್ಯನಾದವನು ಹಾಗೂ ನಾಯಕ ಬಸವಣ್ಣನೇ ಆಗಿದ್ದಾನೆ. ಆದರೆ ಇಲ್ಲಿ ಮಾಚಿದೇವ ನಾಯಕನನ್ನೇ ಜರೆದಂತಿದೆ.

"ಜಂಗಮ ೧: ತಿರುಕನ ಕನಸಿನ ಹಾಗಾಯ್ತಲ್ಲಪ್ಪ ಈ ತಿರುಬೋಕಿಗಳ ಮಹಾಮನೆ.

ಜಂಗಮ ೨: ಇವರ ಹೊಟ್ಟೆಗೆ ಬೆಂಕಿಬೀಳ ಇವತ್ತು ನಮಗೆ ಕೊಟ್ಟಿದ್ದು ಒನಕಲು ರೊಟ್ಟಿ, ಮುಂಡಿ, ಪಲ್ಯ

ಜಂಗಮ ೩: ಚರ್ಚೆ ಮಾಡಿದ್ದೂ ಮಾಡಿದ್ದೆ. ಇವರ ವಂಶ ನಾಶವಾಗ.

ಜಂಗಮ ೧: ಆ ಬಸವಣ್ಣನೇ ಸರಿ, ಅವನಿದ್ದಿದ್ದರೆ ಅದೇನು ಉಪಚಾರ, ಅದೇನು ತುಪ್ಪ, ಗಟ್ಟಿ ಮೊಸರು!

ಜಂಗಮ ೨: ಯಾರ ತೀಟೆಗೆ ಉಪಚಾರ ಮಾಡ್ತಿದ್ದ? ನಮ್ಮಂಥ ವಿರಕ್ತರು, ತಪೋದನರು, ಅಸ್ಖಲಿತ ಬ್ರಹ್ಮಚಾರಿಗಳು ಭೂಮಂಡಲದಲ್ಲೇ ಸಿಕ್ಕೋದಿಲ್ಲ. ನಮ್ಮ ಸೇವೆ ಮಾಡಿದ್ದು ಅಂದರೆ ಅವನ ಹದಿನಾಲ್ಕು ಜನ್ಮಗಳ ಪುಣ್ಯ".[೬]

ಈ ನಾಟಕದಲ್ಲಿ ಬಸವಣ್ಣ ಯಾರ ಪರವಾಗಿ ನಿಂತು ಅವರ ಕೃತಿಗೆ ತನ್ನ ಧ್ವನಿ ಸೇರಿಸಿ ಇಡೀ ಬದುಕನ್ನೇ ಅರ್ಪಿಸಿದನೋ ಅವರೋ ಇಂದು ಬಸವಣ್ಣನನ್ನು ತಿರಸ್ಕಾರ, ಅಶ್ಲೀಲ ಮನೋಭಾವದಿಂದ ನೋಡಿತ್ತಿರುವಂತೆ ನಾಟಕಕಾರರು ಗ್ರಹಿಸಿದ್ದಾರೆ. ಹಿಂದಿನಿಂದಲೂ ನಂಬಿಕೊಂಡು ಬಂದ ಸಂಗತಿಯೆಂದರೆ ಬಸವಣ್ಣ ಬ್ರಾಹ್ಮಣ ಕುಟುಂಬದ ದಂಪತಿಗಳಾದ ಮಾದರಸ ಮತ್ತು ಮಾದಲಾಂಬಿಕೆಯರ ಉದರದಲ್ಲಿ ಜನಿಸಿದವರು. ಆದರೆ ಎಚ್.ಎಸ್.ಶಿವಪ್ರಕಾಶರು ಅವರ ಚಾರಿತ್ರ್ಯವನ್ನು ಕುರಿತು ಈ ರೀತಿಯಾಗಿ ಗ್ರಹಿಸಿದ್ದಾರೆ.

"ಮುಕುಂದಭಟ್ಟ: ನಮ್ಮದೂ ತಪ್ಪಿದೆ ಸ್ವಾಮಿ. ನಾವು "ಹಾಳಾಗಿಹೋಗಲಿ ನಮ್ಮ ಪಿಂಡಾನೆ" ಅಂತ ಉದಾಸೀನ ಮಾಡಿದೆವು. ಆಮೇಲೆ ಗೊತ್ತಾಯ್ತು, ಅವನ ತಾಯಿಗೆ ಬಹಳ ದಿನ ಪುತ್ರ ಫಲಿಸಿರಲಿಲ್ಲ, ಆಮೇಲೆ....

ಆದಿನಾಥಯ್ಯ: ಅಂದರೆ..... ಸಂದುಗೊಯ್ಕಲು ಅನ್ನಿ. ಆಶ್ಚರ್ಯ! ನಿಮ್ಮ ಕುಲದಲ್ಲೂ ಹೀಗೆಲ್ಲಾ ಉಂಟಾ? ಹೀಗೆ ಈ ನಾಟಕದಲ್ಲಿ ಬಸವಣ್ಣನಜನನದ ಹಿಂದಿನ ರಹಸ್ಯವನ್ನು ಹೇಳಿ ಇತಿಹಾಸವನ್ನು ತಿರುಚಿದ್ದಾರೆ ಎಂದು ಹೇಳಬಹುದು",[೭]

'ತಲೆದಂಡ' ನಾಟಕದಲ್ಲಿ ಗಿರೀಶ್ ಕಾರ್ನಾಡರು ಬಸವಣ್ಣನವರು ಎಲ್ಲಾ ರೀತಿಯ ಸಂಸ್ಕೃತಿಗಳಿಗೆ ಸ್ಪಂದಿಸುವ ವ್ಯಕ್ತಿಯಾಗಿ ತೋರಿಸಿದ್ದಾರೆ. ಅಂತರ್ ಜಾರಿ ವಿವಾಹ ಬ್ರಾಹ್ಮಣನಾದ ಮಾದರಸನ ಮಗಳು ಕಲಾವತಿ ದಲಿತನಾದ ಹರಳಯ್ಯನ ಮಗನಾದ ಶೀಲವಂತನೊಂದಿಗೆ ವಿವಾಹವಾಗಬೇಕಾದ ಪ್ರಸಂಗದಲ್ಲಿ

ಬಸವಣ್ಣ: "ಹರಳಯ್ಯ ಇಲ್ಲಿ ತನಕ ನಾವು ಮಾಡಿದ್ದೆಲ್ಲ ತತ್ವದ ಮಾತಾತು, ಒಡನಾಟದ ಮಾತಾತು, ಆದರೆ ಇದು ಲಗ್ನ! ವರ್ಣಾಶ್ರಮ ಧರ್ಮದ ಬೇಲಿಗೆ ಕೊಡಲಿ ಏಟು ಕಳೆದ ಎರಡು ಸಾವಿರ ವರ್ಷದಾಗ ಇಂಥ ಸಂಬಂಧ ಕೂಡಿಲ್ಲ ಸನಾತನಿಗಳು ಕೊಡಗೊಟ್ಟಿಲ್ಲ. ಈ ಸುದ್ದಿ ಗೊತ್ತಾದರ ಎಂಥಾ ವಿಷ ಹೊರಹೊಮ್ಮುತ್ತದೆ ಎಂಥ ಜ್ವಾಲೆ ಭುಗಿಲೇಳುತದ ಗೊತ್ತದ ನಿಮಗೆಲ್ಲ....!

ಅಂದರೆ ಇಲ್ಲಿ ಬಸವಣ್ಣ ಬದಲಾವಣೆ ಬಯಸುತ್ತಾನೆ.

೧೯೪೪ರಲ್ಲಿ ಪ್ರಕಟಗೊಂಡ ಅ.ನ.ಕೃ.ರವರ 'ಜಗಜ್ಯೋತಿ ಬಸವೇಶ್ವರ' ನಾಟಕವು ಬಸವಣ್ಣನನ್ನು ದೈವಾಂಶ ಸಂಭೂತನೆಂದು ಹೇಳುತ್ತದೆ. ಶಿವನ ಆಜ್ಞೆಯಂತೆ ನಂದಿಯು ಮಾದಲಾಂಬಿಕೆಯ ದಿವ್ಯ ಗರ್ಭದಲ್ಲಿ ಅವತರಿಸಿ ಬಸವಣ್ಣನಾಗಿ ಜಗತ್ತನ್ನು ಶುದ್ಧಿಕರಿಸಿದನು ಎಂದು ಅ.ನ.ಕೃ.ರವರ ಅಭಿಪ್ರಾಯವಾಗಿದ್ದು, ಇವರು ದೈವಿಕ ನೆಲೆಯಲ್ಲಿ ಯೋಚನೆ ಮಾಡಿದಂತೆ ತೋರುತ್ತದೆ. ಈ ನಾಟಕವು ಬಸವಣ್ಣನ ಬಾಲ್ಯದಿಂದ ಹಿಡಿದು ಆತನು ಕಲ್ಯಾಣ ನಗರವನ್ನು ಬಿಟ್ಟು ಹೋಗುವವರೆಗೆ ನಡೆಯುತ್ತಾ ಹೋಗುತ್ತದೆ. ಈ ನಾಟಕವು ಸಿನಿಮಾವಾಗಿ ಪ್ರಸಿದ್ಧಿ ಹೊಂದಿರುವುದನ್ನು ಗಮನಿಸಬಹುದು. ಈ ನಾಟಕ ಎಷ್ಟರ ಮಟ್ಟಿಗೆ ದೈವೀಕರಿಸಿದರೆ ಈ ಕೆಳಗಿನ ಮಾತನ್ನು ನೋಡಬಹುದು.

"ಮಾದರಸ: ಸಮಯಕ್ಕೆ ಬಂದಿರಿ ಗುರುದೇವ.

ಜಾತವೇದ: ನಿನ್ನ ಖಿನ್ನತೆ ನೋಡಿ ನನಗೆ ಪರಮಾಶ್ಚರ್ಯವಾಗುತ್ತದೆ ಹೆಗ್ಗಡೆ!

ಮಾದರಸ: ಇಲ್ಲಿ ನೋಡಿ! (ಮಗುವನ್ನು ತೋರಿಸುವನು, ಜಾತದೇವ ಅದನ್ನು ಸ್ಪಷ್ಟವಾಗಿ ಗಮನಿಸುವನು) ಮಗನನ್ನು ಬೇಡಿದೆ. ವ್ರತಕ್ಕೆ ಕಿಂಚಿತ್ತೂ ಭಂಗಬಾರದಂತೆ ನಿಷ್ಠೆಯಿಂದಿದ್ದೆ. ನೋಡಿ ಗುರುದೇವ ಶಿವನ ವರನನ್ನು....

ಜಾತದೇವ: ಏನಾಗಿದೆ?

ಮಾದರಸ: ಅಳುವಿಲ್ಲ! ನಗುವಿಲ್ಲ! ಚಲನವಲನವಿಲ್ಲ! ಜೀವಕಳೆಯಿಲ್ಲ! ಕಲ್ಲುಗುಂಡಿನ ಹಾಗೆ ಬಿದ್ದಿದೆ.

ಜಾತದೇವ: (ನಗುತ್ತಾ) ಹೆಗ್ಗಡೆ, ಏಕೆ ಚಿಂತಿಸುವೆ? ನಿನ್ನ ಮಗ ಅಳಲಿಲ್ಲ, ನಗಲಿಲ್ಲ, ಕೈಕಾಲು ಅಲುಗಾಡಿಸಲಿಲ್ಲ ಎಂದು ದುಃಖಿಸುವೆಯಾ? ಲೋಕ ಕಲ್ಯಾಣದ ಧ್ಯಾನದಲ್ಲಿ ಶಿವಪುತ್ರ ತಲ್ಲೀನನಾಗಿದ್ದಾನೆ. ತನ್ನ ಕರ್ತವ್ಯ ಭಾಗವನ್ನು ನೆನೆಯುತ್ತಾ ಶಾಂತನಾಗಿದ್ದಾನೆ. ಜಗತ್ತಿನ ಅಳುವನ್ನು ಸರಿಪಡಿಸಿ ನಗೆಯ ಹೊನಲು ಹರಿಸಲು ಬಂದಿರುವ ಕಾರಣಿಕನವನು. ಏಳು ಶಿವಕುಮಾರ, ನಿದ್ದೆ ಸಾಕು, ಹಗಲು ಹರಿದಿದೆ, ಏಳು! ದುಃಖಿತ ಜಗತ್ತಿನ ಕೋಟಲೆ ನೀನು, ಏಳು! ಶಿವಭಕ್ತಿ ಸಾರಾಯವನ್ನು ಬೀರು, ಏಳು ಬಸವರಾಜ!"[೮]

ಆಗ ಮಗು ಅಳುವುದು; ಕೈಕಾಲು ಆಡಿಸುವುದು. ಈ ರೀತಿಯಾಗಿ ಬಸವಣ್ಣನನ್ನು ಭೂಲೋಕಕ್ಕೆ ತರುವ ಕೆಲಸವನ್ನು ಲೇಖಕರು ಮಾಡಿದ್ದಾರೆ. ಬಸವಣ್ಣನವರು ಬಿಜ್ಜಳನ ಮಗ ಕುಮಾರನಿಗೆ ಹೇಳಿಕೊಡುವ ಪಾಠವೇ ಇದಾಗಿರುತ್ತದೆ.

"ನುಡಿದರೆ ಮುತ್ತಿನ ಹಾರದಂತಿರಬೇಕು
ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು
ನುಡಿದರೆ ಸ್ಫಟಿಕದ ಶಲಾಕೆಯಂತಿರಬೇಕು
ನುಡಿದರೆ ಲಿಂಗ ಮೆಚ್ಚಿ ಅಹುದಹುದೆನಬೇಕು
ನುಡಿಯೊಳಗೆ ನಡೆಯದಿದ್ದಡೆ
ಕೂಡಲಸಂಗಮದೇವನೆಂತೊಲಿವನಯ್ಯ"

ಈ ನಾಟಕವು ಬಸವಣ್ಣನವರು ಬಿಜ್ಜಳನ ಆಸ್ಥಾನದಲ್ಲಿದುಕೊಂಡು ಮಹಾಮಂತ್ರಿಯಾಗಿ ಏನೆಲ್ಲಾ ಜನಹಿತ ಕಾರ್ಯಗಳನ್ನು ಮಾಡಿದ್ದರು ಎಂಬುದನ್ನು ತಿಳಿಸುತ್ತದೆ.. ಆದರೆ ಬಸವಣ್ಣನವರು ಸಾಮಾನ್ಯರಂತೆ ಜೀವನವನ್ನು ಸಾಗಿಸುತ್ತಿದ್ದರು ಎಂಬುದನ್ನು ಅದರ ಜೊತೆಗೆ ಅವರ ತತ್ವವನ್ನು ನೆನಪಿಸುತ್ತದೆ. ಈ ನಾಟಕದಲ್ಲಿ ಅವರನ್ನು ದಯೆ, ಕಾರಣ್ಯ, ವಿನಯ, ಕೌಶಲ್ಯಗಳ ಘನೀಭೂತ ವ್ಯಕ್ತಿಯನ್ನಾಗಿ ಮಾಡಲಾಗಿದೆ.

"ಬಸವ : ಬನ್ನಿರೆಂದು ಕರೆದವನು ನಾನು ಹೋಗಿರೆಂದು ಯಾವ ಬಾಯಲಿ ಹೇಳಲಿ?

ವಿರೂಪಾಕ್ಷ: ಈ ಹಟಮಾರಿತನದಿಂದ ನೀವು ದೇಶದಲ್ಲಿ ಕ್ರಾಂತಿಯನ್ನೆಬ್ಬಿಸುತ್ತಿರುವಿರಿ.

ಬಸವ : ಹೌದು! ಶಾಂತಿಗೆ ಮುನ್ನ ಕ್ರಾಂತಿಯಾಗಬೇಕು.

ಸೂರಭಟ್ಟ: ಪರಂಪರಗತವಾಗಿ ಬಂದ ಧರ್ಮವನ್ನು ಕಾಯುವುದು ನಿಮ್ಮ ಕೆಲಸ ನಾಶ ಮಾಡುವುದಲ್ಲ!

ಬಸವ : ಯಾವುದು ಧರ್ಮ! ನಿರಪರಾಧಿಗಳನ್ನು ಹಿಂಸಿಸುವುದೇ?

ವಿರೂಪಾಕ್ಷ: ಜಾತಿಕಟ್ಟಳೆ ಮೀರಿದ ಹೊಲೆಯರು ನಿರಪರಾಧಿಗಳೇ?

ಬಸವ : ಅಲ್ಲ! ಅಪರಾಧಿಗಳು ಅವರಿಗಿಂತ ಘೋರ ಅಪರಾಧಿಗಳು ಈ ಜಾತಿ ಕಟ್ಟಳೆ ವಿಧಿಸಿದ ನಿಮ್ಮಂತಹವರು.

ಸೂರಭಟ್ಟ: ನೀವು ಏನೇ ಹೇಳಿದರೂ ನಾವು ಧರ್ಮವನ್ನು ಬಲಿಕೊಡಲು ಸಿದ್ಧರಾಗಿಲ್ಲ.

ಬಸವ : ಆದರೆ ಧರ್ಮದ ಹೆಸರಿನಲ್ಲಿ ದಯೆಯನ್ನು ಧರ್ಮಿಷ್ಟರನ್ನು ಬಲಿಗೊಡಲು ಸಿದ್ಧರಾಗಿದ್ದಿರಿ!

"ದಯೆಯಿಲ್ಲದ ಧರ್ಮವಾವುದಯ್ಯ?
ದಯವೇ ಬೇಕು ಸಕಲ ಪ್ರಾಣಗಳೆಲ್ಲರಲಿ
ದಯವೇ ಧರ್ಮದ ಮೂಲವಯ್ಯ
ಕೂಡಲಸಂಗಯ್ಯನಂತಲ್ಲದೊಲ್ಲನಯ್ಯ"

ಈ ನಾಟಕದಲ್ಲಿ ಅತನ ವಚನಗಳ ಮೂಲಕವೇ ಆತನ ಸಿದ್ಧಾಂತ, ತತ್ವಗಳನ್ನು ತಿಳಿಸುವ ಕೆಲಸವನ್ನು ಪಾತ್ರಗಳ ಮೂಲಕ ಪ್ರಸ್ತುತ ಸಂದರ್ಭಕ್ಕೆ ಪ್ರಸ್ತುತ ದಿನಮಾನಗಳಿಗೆ ಹೊಂದಿಕೆಯಾದಂತೆ ಬರೆದಿದ್ದಾರೆ. ಈ ನಾಟಕದಲ್ಲಿ ಬಿಜ್ಜಳನು ಮತ್ತು ಆತನ ಹೆಂಡತಿ ಶಾಂತಿಮತಿ ಕೂಡ ಬಸವಣ್ಣನ ವಚನಗಳನ್ನು ಒಪ್ಪಿಕೊಂಡಿದ್ದರು.

ಕುಮಾರ: "ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ,
ಮುನಿಯಬೇಡ, ಅನ್ಯರಿಗೆ ಅಸಹ್ಯಪಡಬೇಡ,
ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ,
ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ,

ಇದೇ ನಮ್ಮ ಕೂಡಲಸಂಗನೊಲಿಸುವ ಪರಿ"

ಬಿಜ್ಜಳ : (ತನ್ನಷ್ಟಕ್ಕೆ) ಕಳಬೇಡ–ಕೊಲಬೇಡ–ಹುಸಿಯ ನುಡಿಯಲುಬೇಡ....

ಕುಮಾರ: ಚೆನ್ನಾಗಿಲ್ವೇ ಅಪ್ಪಾಜಿ.

ಬಿಜ್ಜಳ : ತುಂಬಾ ಚೆನ್ನಾಗಿದೆ ಕಂದ. ಶಾಂತಾ ಎಂಥ ಮಹಾನುಜನರು ಬಸವಣ್ಣನವರು!

ಬಸವಣ್ಣನವರ ಕಾಮಿಲಿ ನಿಷೇಧದ ತತ್ವವನ್ನು ಈ ರೀತಿ ಪತ್ರದ ಮೂಲಕ ತರುತ್ತಾರೆ. ಅವರಿಗೆ ಇದ್ದ ಕನಿಕರ, ದಯೆಯ ಗುಣ ಎಷ್ಟಿತ್ತು ಎಂಬುದನ್ನು ಈ ಕೆಳಗಿನ ಪಾತ್ರಗಳ ಮೂಲಕ ಗಮನಿಸಬಹುದು.

"ಬಸವ : ಅಪ್ಪಾ! ಮೇಕೆಯನ್ನೇಕೆ ಎಲೆಯುತ್ತಿರುವಿರಿ?

ಹಳ್ಳಿಗ ೧: ನೋಡಿ ಬುದ್ಧಿ! ಮುಂಡೇದು ಬರಕಿಲ್ಲಾನ್ನತ್ತೆ!

ಬಸವ : ಎಲ್ಲಿಗೆ?

ಹಳ್ಳಿಗ : ನಿಮಗೆ ಗೊತ್ತೇ ಇಲ್ವಾ ಬುದ್ಧೀ?

ಶಂಕರ : ಏನು ವಿಷಯ?

ಹಳ್ಳಿಗ ೧: ಪಕ್ಕದ ಸೋಮೇನಹಳ್ಳೀಲಿ ಯಾಗ ಮಾಡ್ತಾ ಅವ್ರೆ, ನಾವೆಲ್ಲಾ ನಮ್ಮ ಹರಕೆ ಒಪ್ಸೋಕೆ ಹೊಂಟೀವಿ.

ಬಸವ : ಅದಕ್ಕೆ ಮೆಕೆ ದುಃಖಿಸುತ್ತಿದೆ. ಅಯ್ಯಾ ಇದನ್ನು ಬಿಟ್ಟುಬಿಡಿ, ಪ್ರಾಣಿಹತ್ಯೆ ಮಾಡಬಾರದು. ಅದು ಮಹಾಪಾಪ!

ಹಳ್ಳಿಗ ೨: ಹರಕೆ ತಪ್ಸೋದು ಪಾಪ ಅಲ್ಲಾ ಬುದ್ಧಿ.

ಬಸವ : ಅಣ್ಣಾ! ನಿನ್ನ ನನ್ನ ಎಲ್ಲರನ್ನು ಸೃಷ್ಟಿ ಮಾಡಿದ ದೇವರೇ ಈ ಮೇಕೆಯನ್ನು ಸೃಷ್ಟಿ ಮಾಡಿದ. ಅವನೇ ನಮ್ಮೆಲ್ಲರ ತಂದೆ. ಇದರ ತಂದೆಯು ಹೌದು, ತಂದೆಯೇ ಮಕ್ಕಳ ರಕ್ತ ಮಾಂಸವನು ಉಣ್ಣುತ್ತಾನೆಯೇ?

ಹಳ್ಳಿಗ ೧: ಅವೆಲ್ಲಾ ನಮ್ಗೇನು ಗೊತ್ತು ನನ್ನೊಡೆಯಾ. ಅಯ್ನೋರು ಹೇಗೆ ಹೇಳ್ತಾರೋ ಅಂಗೆ ಕೇಳೋರು ನಾವು.....

ಬಸವ : ಪ್ರಾಣಿಹತ್ಯೆ ಮಾಡಿರೆಂದು ಅಯ್ಯನವರು ಹೇಳಿದರೆ ಅದು ತಪ್ಪು.

ಹಳ್ಳಿಗ ೧:(ಹಳ್ಳಿಗನಿಗೆ) ನೋಡಿದ್ಯೇನ್ಲಾ ನಿಂಗಾ, ನಮ್ಮ ಅಯ್ಯನವರಿಗಿಂತ ಈ ಅಯ್ಯ ಬುದ್ಧಿವಂತನಾಗಿದ್ದಾನೆ. ಓಗಿ ಬುದ್ಧಿ.

ಬಸವ : ಅಯ್ಯೋ! ಕೈ ಜೋಡಿಸಿ ಬೇಡುತ್ತೇನೆ ಪ್ರಾಣಿವಧೆಗೆ ಅವಕಾಶ ಕೊಡಬೇಡಿ, ಇದು ಶಿವದ್ರೋಹ...

ಹಳ್ಳಿಗ ೧: (ಕೋಪದಿಂದ) ಸುಮ್ನೆ ಓಗ್ತಿರೋ ಇಲ್ವೋ ಬುದ್ಧಿ.... ನಮ್ಮ ಸುದ್ಧಿ ಕಟ್ಕೊಂಡು ನಿಮಗೆ ಏನು? ಹರಕೆ ನಾವು ತಪ್ಪಿಸಿದ್ರೆ ಮನೆ ಮಕ್ಕಳು ಎಲ್ಲಾ ನಾಶವಾಗ್ತಾರೆ..!

ಬಸವ : ಅಯ್ಯೋ, ಅಜ್ಞಾನವೇ? ಆಗ ಮೇಕೆಯು ಬಸವಣ್ಣನನ್ನು ದೈನ್ಯದಿಂದ ನೋಡುವುದು. ಬಸವಣ್ಣನವರ ಕರುಣೆಯನ್ನು ಅವರಿಂದಲೇ ಹೇಳಿಸಿದ್ದಾರೆ.

"ಮಾತಿನ ಮಾತಿಂಗೆ ನಿನ್ನ ಕೊಂದಿಹರೆಂದು ಎಲೆ ಹೋತೆ ಅಳು ಕಂಡ್ಯಾ
ವೇದವನೋದಿದವರ ಮುಂದೆ ಅಳು ಕಂಡ್ಯಾ
ಶಾಸ್ತ್ರವ ಕೇಳಿದವರ ಮುಂದೆ ಅಳು ಕಂಡ್ಯಾ
ನೀನತ್ತುದಕ್ಕೆ ತಕ್ಕುದ ಮಾಡುವ ಕೂಡಲಸಂಗಮದೇವಾ"

ಈ ನಾಟಕವು ಪ್ರಸ್ತುತ ದಿನಮಾನಕ್ಕೆ ಹೊಂದಿಕೆಯಾಗುತ್ತದೆ. ಏಕೆಂದರೆ ಬ್ರಾಹ್ಮಣರು ಮೇಕೆಯಾಗ ಮಾಡಿದಾಗಲೂ ಅವರ ಮೇಲೆ ಯಾವ ರೀತಿಯಿಂದಲೂ ಕ್ರಮ ತೆಗೆದುಕೊಳ್ಳಲಿಲ್ಲ. ಹಾಗೆಯೆ ಈ ನಾಟಕದಲ್ಲಿ ತನ್ನ ಮುಂದೆಯೇ ಮೇಕೆಯನ್ನು ಕೊಲ್ಲಲು ಎಳೆದುಕೊಂಡು ಹೋದರೂ ಬಸವಣ್ಣನ

ವಚನಗಳು ಅದನ್ನು ಕೇಳಲಿಲ್ಲ. ಮನುಷ್ಯ ಅಂಧಕಾರ, ಅಜ್ಞಾನದ ಅಂಶಗಳನ್ನು ಎತ್ತಿಹಿಡಿದಿದ್ದಾರೆ. ಬಲಿ ಕೊಡದಿದ್ದರೆ ಮಕ್ಕಳು ಸಾಯುತ್ತಾರೆ ಎಂದು ಹೇಳುವ ಜನರ ಮಾತನ್ನು ಈಗಿನ ದಿನಮಾನಗಳಲ್ಲಿ ಪ್ರಾಣಿಬಲಿ ನಡೆಯುತ್ತಿರುವುದನ್ನು ಗಮನಿಸಬಹುದು. ಕಾನೂನು ಕಟ್ಟಳೆಗಳನ್ನು ಮೀರಿ ಪ್ರಾಣಿಬಲಿ ನಡೆಯುತ್ತಿರುವುದನ್ನು ಈ ನಾಟಕವು ವರ್ತಮಾನಕ್ಕೆ ಸಮೀಪವಿದ್ದಂತೆ ತೋರುತ್ತದೆ.

ಈ ನಾಟಕವು ಬಸವಣ್ಣನ ವಿದ್ವತ್ ಪಾಂಡಿತ್ಯವನ್ನು ಹೇಳುತ್ತಾರೆ. ಬಿಜ್ಜಳನ ಒಡ್ಡೋಲಗದಲ್ಲಿ ದೊರೆ ಅಲಂಕರಿಸಿದ ಸಮಯದಲ್ಲಿ ಅಲ್ಲದೇ ಎಲ್ಲ ಮಂತ್ರಿಗಳು ಸೇರಿದ ಸಮಯದಲ್ಲಿ ಬಸವಣ್ಣ ಎಡದ ಮೂಲೆಯಲ್ಲಿ ನಿಂತಿದ್ದಾನೆ. ನಾಟ್ಯ ಸಾಗಿರುತ್ತದೆ. ದೊರೆ ತಲೆತೂಗುತ್ತಿದ್ದಾನೆ. ಒಂದು ತಾಳೆಗರಿ ಗಾಳಿಗೆ ತೂರಿಕೊಂಡು ಬರುತ್ತದೆ. ಅಕಪಕ್ಕದಲ್ಲಿ ನಿಂತಿದ್ದವರು ಅದನ್ನು ಹಿಡಿಯಲೆತ್ನಿಸುತ್ತಾರೆ. ಅದನ್ನು ನರ್ತಕಿಯು ಅದನ್ನೆತ್ತಿಕೊಂಡು ಮಂಚಣ್ಣನಿಗೆ ಒಪ್ಪಿಸುತ್ತಾಳೆ. ಅವನು ಅದನ್ನು ದೊರೆಗೆ ಒಪ್ಪಿಸುತ್ತಾನೆ. ದೊರೆಯು(ಬಿಜ್ಜಳನು) ಈ ತಾಳೆಗರಿ ಎಂತಹ ವಿಚಿತ್ರ ಲಿಪಿ? ಪಂಡಿತರೇ ಇದನ್ನು ಓದಬಲ್ಲಿರಾ? ಎಂದಾಗ ಅಲ್ಲಿದ್ದ ಮಂತ್ರಿಗಳಿಂದ ನಾರಾಯಣ ಇದು ಪೈಶಾಚಿಕ ಭಾಷೆಯೆಂದರೆ, ಮಂಚಣ್ಣ ಉಪಲಬ್ಧವಿಲ್ಲದ ಭಾಷೆಯೆಂದರೆ, ಆಗ ಆ ಓಲೆಯು ಕೈಯಿಂದ ಕೈಗೆ ಹೋಗಿ ಬಸವಣ್ಣನ ಕೈಗೆ ಬರುತ್ತದೆ. ಆಗ ಬಸವಣ್ಣ ಖಂಡಿತ ಓದಬಲ್ಲೇ ಮಂತ್ರಿಯವರೇ ಎಂದು ಹೇಳಿ ಅದನ್ನು ಓದುತ್ತಾನೆ. ಆದ್ದರಿಂದ ಬಿಜ್ಜಳನ ಸಂಪತ್ತು ಹೆಚ್ಚುತ್ತದೆ. ಈ ನಾಟಕವು ಬಸವಣ್ಣನ ಜ್ಞಾನಸಂಪತ್ತನ್ನು ಪ್ರಚುರಪಡಿಸುವ ಮೂಲಕ ಬಿಜ್ಜಳನೊಂದಿಗೆ ಯಾವ ರೀತಿಯಾಗಿ ಅನ್ಯೋನ್ಯತೆ ಉಂಟಾಯಿತ್ತು ಎಂಬುದನ್ನು ತಿಳಿಸುತ್ತದೆ. ಸಂಪತ್ತು ಸಿಕ್ಕ ಮೇಲೆ ಬಿಜ್ಜಳನು ಬಸವಣ್ಣನನ್ನು ಅಭಿಮಾನದಿಂದ ನೋಡುತ್ತಾ ಬಸವರಾಜರೇ, ಈ ಸಂಪತ್ತು ಭಂಡಾರ ನಿಮಗೆ ಸೇರಬೇಕಾದದ್ದು. ಇದನ್ನು ನೀವು ತೆಗೆದುಕೊಳ್ಳಿರಿ ಎಂದಾಗ ಬಸವಣ್ಣನು ಮಹಾಪ್ರಭು ದೊರೆಯ ಹಣ ದೊರೆಗೆ ಮೀಸಲು ದೊರೆಯ ಪ್ರಜೆಯರಿಗೆ ಮೀಸಲು, ತಮಗೆ ಸಲ್ಲತಕ್ಕದನ್ನು ನಾನು ಒಯ್ದರೆ ಹರ ಮೆಚ್ಚುವನೇ? ಅದಕ್ಕೆ ಬಿಜ್ಜಳ ನೀವು ಓಲೆಯನ್ನೋದದಿದ್ದರೆ ಇದು ನಮ್ಮ ಕೈವಶವಾಗುತ್ತಿತ್ತೇ?

"ಬಸವ : ಆಸ್ಥಾನದ ಸೇವಕ ತನ್ನ ಕರ್ತವ್ಯ ನಿರ್ವಹಿಸಿದ್ದಾನೆ. ಅದಕ್ಕೆ ಇಂಥ ಸಂಭಾವನೆ ಅವನಿಗೆ ಸಲ್ಲಬೇಕಾದುದಲ್ಲ".[೧೦]

ಎಂದು ಹೇಳುವ ಮೂಲಕ ಕಾಯಕದ ಪರಿಕಲ್ಪನೆಯನ್ನು ಹುಟ್ಟುಹಾಕುತ್ತಾರೆ. ಅಲ್ಲದೇ ವೃತ್ತಿಧರ್ಮದ, ಕಾಯಕ ನಿಷ್ಠೆಯ ತತ್ವವನ್ನು ಈ ನಾಟಕ ಹೊರ ತೆಗೆಯುತ್ತದೆ.

ಈ ನಾಟಕದಲ್ಲಿ ನಾಟಕಕಾರರು ಬಸವಣ್ಣನ ಹುಟ್ಟಿನಲ್ಲಿ ಧಾರ್ಮಿಕತೆಯೊಂದಿಗೆ ಸಮೀಕರಿಸಿ ನೋಡಿದ್ದಾರೆ. ಇತನ ಹುಟ್ಟು ಸಹಜವಾದುದಲ್ಲ. ಭುಮಿಯ ಮೇಲೆ ಆತ ಅವತರಿಸಲು ಮುಖ್ಯ ಕಾರಣವೆಂದರೆ ಭೂಲೋಕದಲ್ಲಿ ನೈತಿಕ ಮತ್ತು ಧಾರ್ಮಿಕ ಅಧಃಪತನ ಉಂಟಾಗಿದ್ದವು. ಇಂತಹ ಸಂದಿಗ್ಧ ಸಂದರ್ಭದಲ್ಲಿ ಅವುಗಳನ್ನು ನಿರ್ಮೂಲನೆ ಮಾಡುವ ಸಲುವಾಗಿ ಶಿವ ಪಾರ್ವತಿಯರೇ ನಂದಿಗೆ ಬಸವನ ಅವತಾರದಲ್ಲಿ ಮಾದರಸ ಮತ್ತು ಮಾದಲಾಂಬಿಕೆಯ ಉದರದಲ್ಲಿ ಜನಿಸುವಂತೆ ಮಾಡುತ್ತಾರೆ. ಹಾಗಾಗಿ ಬಸವಣ್ಣನು ಸಾಮಾಜಿಕ ಕಾರ್ಯಗಳಲ್ಲಿ ಸಫಲನಾಗುತ್ತಾನೆ.

ಎಂ.ಸಿ.ರಾಮಲಿಂಗಯ್ಯನವರು ರಚಿಸಿದ "ಕ್ರಾಂತಿಯೋಗಿ ಬಸವಣ್ಣ" ಎಂಬ ನಾಟಕವು ಪ್ರತ್ಯೇಕವಾದ ವಿಷಯದೊಂದಿಗೆ ಬಸವಣ್ಣನೊಬ್ಬ ಧಾರ್ಮಿಕ ಪುರುಷನೆಂದು ಎಲ್ಲಾ ನಾಟಕಕಾರರು ಒಪ್ಪಿಕೊಂಡಂತೆ ಒಪ್ಪಿಕೊಂಡರೂ ಆತನ ಬಾಲ್ಯದ ಜೀವನದ ಬಗೆಗೆ ವಿಶಿಷ್ಟವಾಗಿ ಗುರುತಿಸುವ ನಾಟಕ

ಇದಾಗಿದೆ. ಬಸವಣ್ಣನ ಬಗೆಗೆ ಹೊಸ ಸಂಗತಿಯನ್ನು ಈ ನಾಟಕದಲ್ಲಿ ಭಿತ್ತಿಸುವುದರೊಂದಿಗೆ ಆತನ ಬಾಲ್ಯದಲ್ಲಿರುವ ವಿಶೇಷತೆಯನ್ನು ಕುರಿತು ಚಿತ್ರಿಸುತ್ತಾರೆ. ಕೈಲಾಸ ದೃಶ್ಯದಿಂದ ಈ ನಾಟಕ ಪ್ರಾರಂಭವಾಗುತ್ತದೆ. ಇದೇ ದೃಶ್ಯ ಪ್ರಥಮಾಂಕದೊಳಗೆ ಬೀದಿಯ ಪ್ರವೇಶ ಪ್ರಾರಂಭವಾಗುತ್ತದೆ. ಈ ದೃಶ್ಯದಲ್ಲಿ ನಾಟಕಕಾರರು ಬಸವಣ್ಣನ ಜೊತೆಗೆ ಇನ್ನೂ ಕೆಲವು ಪಾತ್ರಗಳನ್ನು ಸೃಷ್ಟಿಸಿ ಬಾಲ್ಯ ಸ್ನೇಹಿತರೊಂದಿಗೆ ಬಸವಣ್ಣನ ಪವಾಡ ಸದೃಶ್ಯವನ್ನು ಎತ್ತಿತೋರಿಸುವಲ್ಲಿ ಪ್ರಾಮುಖ್ಯತೆಯನ್ನು ಮೆರೆದಿದ್ದಾರೆ. ಈ ನಾಟಕಕಾರರು ಸೃಷ್ಟಿಸಿರುವ ಪಾತ್ರಗಳು ಕಾಲ್ಪನಿಕವಾಗಿ ಅಭಿವ್ಯಕ್ತಗೊಂಡರೂ ಈ ದೃಶ್ಯದ ಮೂಲಕ ಬಸವಣ್ಣನ ಬಾಲ್ಯದ ಪವಾಡವನ್ನು ಚಿತ್ರಿಸಿರುವುದು ವಿಶೇಷ ಸಂಗತಿಯಾಗಿದೆ.

ಟೊಣಪ, ಬೆನಕ, ಮತ್ತು ಕನಕ ಎಂಬ ಮೂರು ಪಾತ್ರಗಳೊಂದಿಗೆ ಬೆರೆಯುವ ಬಸವಣ್ಣ ವಿಶಿಷ್ಟವಾಗಿ ಕಾಣಿಸಿಕೊಳ್ಳುತ್ತಾನೆ. ಅಂತೆಯೇ ನಾಟಕಕಾರರು ಒಂದು ಕತೆಯ ಸ್ವರೂಪದ ಮೂಲಕ ಬಸವಣ್ಣನ ವ್ಯಕ್ತಿತ್ವವನ್ನು ಬಹುಮುಖಿಯಾಗಿಸಿದ್ದಾರೆ. ಬಸವಣ್ಣನನ್ನು ಮೊದಲುಗೊಂಡು ಈ ಮೂರು ಪಾತ್ರಗಳು ಬಾಲ್ಯದ ಆಟಗಳನ್ನು ಆಡುವುದರೊಂದಿಗೆ ಪ್ರಾರಂಭವಾಗುತ್ತದೆ. ಆದರೆ ಈ ಸ್ನೇಹಿತರೊಂದಿಗೆ ಆಟವಾಡಲು ನಿರಾಕರಿಸಿದ ಬಸವಣ್ಣ ದೇವರಾಟ ಆಡೋಣವೆಂದು ತಿಳಿಸುವಲ್ಲಿ ಆತನ ಮನದಾಳದ ಇಂಗಿತವನ್ನು ವ್ಯಕ್ತಪಡಿಸುತ್ತಾನೆ. ಇಲ್ಲಿ ನಾಟಕಕಾರರು ಬಸವಣ್ಣನು ಬಾಲ್ಯದಲ್ಲಿಯೇ ದೈವಿ ಸ್ವರೂಪಿಯಾಗಿದ್ದ ಎಂಬುದನ್ನು ತಿಳಿಸಲು ಹೊರಟಂತೆ ತಿಳಿಯುತ್ತದೆ. ಕೊನೆಗೆ ಬಾಲ್ಯ ಸ್ನೇಹಿತರು ನೀರಿಗೆ ಈಜಾಡಲು ಹೋಗುತ್ತಾರೆ. ಬಸವಣ್ಣ ದೇವರ ಗುಡಿಯಲ್ಲಿಯೇ ಭಕ್ತಿಯನ್ನು ಮೆರೆಯುತ್ತಾ ತಲ್ಲೀನನಾಗಿರುತ್ತಾನೆ. ಈಜಾಡಲು ಹೋದವರಲ್ಲಿ ಬೆನಕ ನೀರಿನಲ್ಲಿ ಮುಳುಗುತ್ತಾನೆ. ಆಗ ಟೊಣಪ ಮತ್ತು ಕನಕ ಹೆದರಿ ಬೆನಕನನ್ನು ನೀರಿಗೆ ಮುಳುಗಿಸಿದ್ದು ಬಸವಣ್ಣನೆಂದು ಬೆನಕನ ತಂದೆಯ ಮುಂದೆ ಪ್ರಸ್ತಾಪಿಸುತ್ತಾರೆ. ಆಗ ಬೆನಕನ ತಂದೆಯು ಮಗನನ್ನು ಕಳೆದುಕೊಂಡು ನಿಸ್ಸಂದೇಹವಾಗಿ ಮಕ್ಕಳೊಂದಿಗೆ ಸೇರಿ ಬಸವಣ್ಣನಿದ್ದಲ್ಲಿಗೆ ಬರುತ್ತಾನೆ. ಹೀಗೆ ಚರ್ಚೆ ಪ್ರಾರಂಭವಾಗಿ ನಂತರದಲ್ಲಿ ಬಸವಣ್ಣ ನೀರಿಗೆ ಇಳಿದು ಬೆನಕನನ್ನು ಮೇಲೆತ್ತಿ ತಂದು ಶಿವ ದೇವಾಲಯದ ಮುಂದೆ ಇಡುತ್ತಾನೆ. ಇಲ್ಲಿ ನಾಟಕ ಅದ್ಭುತವಾದ ವಿಚಾರಗಳನ್ನು ಮುಂದಿಡುತ್ತದೆ. ಅಷ್ಟೇ ಅಲ್ಲದೇ ಸಂಭಾಷಣೆ ವಿವಿಧ ಮುಖಗಳನ್ನು ಅನಾವರಣ ಮಾಡುತ್ತದೆ. ಬಸವಣ್ಣನ ತಂದೆ ಮಾದರಸ ಬೆನಕನ ತಂದೆ ಶಂಕರನಾರಾಯಣಪ್ಪರ ನಡುವೆ ಸಂಭಾಷಣೆ ಏರ್ಪಟ್ಟಾಗ ಮಾದರಸನನ್ನು ಮಗ ಎಂದಿಗೂ ಯಾರಲ್ಲೂ ಸುಳ್ಳು ಹೇಳಿದವನಲ್ಲ ನನ್ನ ನಂಬಿ ಎಂದು ತಿಳಿಸುತ್ತಾನೆ. ಆಗ ಶಂಕರನಾರಾಣಪ್ಪನು ನಿನ್ನ ಮಗ ಅಪರಾಧಿ, ಈ ತಪ್ಪಿಗೆ ಶಿಕ್ಷೆಯಾಗಲೇಬೇಕು ಎಂದು ಹೇಳಿದಾಗ ಬಸವಣ್ಣ ಬೆನಕನ ಶವವನ್ನು ಶಿವನ ಮುಂದೆ ಇಟ್ಟು ತನ್ನ ಇಂಗಿತವನ್ನು ವ್ಯಕ್ತಪಡಿಸುತ್ತಾನೆ. ಆಗ ಬಸವಣ್ಣ ನಾನು ಕೊಲೆಗಡುಕನಲ್ಲ, ಅಪರಾಧಿಯಲ್ಲ. ಆದರೂ ನಾನು ಈ ಶಿಕ್ಷೆಗೆ ಗುರಿಯಾಗಬೇಕೆಂದು ಶಿವನ ಮೊರೆ ಹೋಗುತ್ತಾನೆ. ಬೆನಕನನ್ನು ಬೋರಲಾಗಿ ಮಲಗಿಸಿ ಹೊಟ್ಟೆಯಲ್ಲಿ ತುಂಬಿದ ನೀರನ್ನು ತೆಗೆದು ಶಿವನನ್ನು ಧ್ಯಾನಿಸುತ್ತಾನೆ. ಆಗ ಬೆನಕ ಎಚ್ಚರವಾಗಿ ತನ್ನನ್ನು ಯಾರು ನೀರಿಗೆ ತಳ್ಳಿಲ್ಲ. ಬಸವಣ್ಣನು ನಮ್ಮ ಜೊತೆ ಬಂದವನಲ್ಲ ಎಂದು ತಿಳಿಸಿದಾಗ ಎಲ್ಲರೂ ದಿಗ್ ಭ್ರಾಂತರಾಗಿ ಬಸವಣ್ಣನ ಬಾಲ್ಯ ಪವಾಡವನ್ನು ಹೊಗಳುತ್ತಾರೆ. ಇದು ನಾಟಕಕಾರರ ಕಲ್ಪನೆಯಾದರೂ ಅಂತಃರಂಗದಲ್ಲಿ ಬಸವಣ್ಣ ಯಾವತ್ತು ಹುಸಿನುಡಿದವನಲ್ಲ ಎಂಬ ವಿಚಾರವನ್ನು ಹೊರಹಾಕಿ ಸತ್ಯಕ್ಕೆ ಸಾವಿಲ್ಲ ಎಂಬ ಸಿದ್ಧಾಂತವನ್ನು ಪ್ರಸ್ತಾಪಿಸಿದ್ದಾರೆ.

ಎಂ.ಎಂ.ಕಲಬುರ್ಗಿಯವರು ಬರೆದ 'ಕೆಟ್ಟಿತು ಕಲ್ಯಾಣ' ನಾಟಕದಲ್ಲಿ ಅವರ ಸಂಶೋಧನೆಯ ಸಂದರ್ಭದಲ್ಲಿ ತಮ್ಮನ್ನು ಕಾಡಿದ ಬಸವಣ್ಣನವರ ಜೀವನ ಚರಿತ್ರೆ, ಅವರು ಸ್ಥಾಪಿಸಿದ ಮೌಲ್ಯಗಳು,

ಎದುರಿಸಿದ ಸಂಘರ್ಷಗಳು ಪ್ರಸ್ತುತ 'ಕೆಟ್ಟಿತು ಕಲ್ಯಾಣ" ನಾಟಕವನ್ನು ನಾಟಕರೂಪದಲ್ಲಿ ಸೃಷ್ಟಿಸಿರುವಂತೆ ಮಾಡಿದೆ. ನಾಟಕಕಾರರು ೮೦೦ ವರುಷಗಳಿಂದ ನಿರಂತರವಾಗಿ ಹರಿದುಬಂದಿರುವ 'ಜಂಗಮ'ದ ಪರಿಕಲ್ಪನೆಯ ಚಲನಶೀಲತೆಯನ್ನು, ಕ್ರಿಯಾಶೀಲತೆಯನ್ನು ನಾಟಕಕಾರರು ಗುರುತಿಸುವ ಪ್ರಯತ್ನ ಮಾಡಿದ್ದಾರೆ.

"ಕೆಟ್ಟಿತು ಕಲ್ಯಾಣ ೧೯೯೫ರಲ್ಲಿ ಪ್ರಕಟವಾದ ನಾಟಕವಾಗಿದ್ದು, ಇದು ನಲವತ್ತು ದೃಶ್ಯಗಳ ನಾಟಕ. ಬಸವಣ್ಣನವರ ವಿವಿಧ ಹಂತದ ಜೀವನ ಚರಿತ್ರೆಯನ್ನು ಇದು ಕಟ್ಟಿಕೊಡುತ್ತದೆ. ಎಂ.ಎಂ.ಕಲಬುರ್ಗಿ ಅವರೇ ಹೇಳುವಂತೆ "ಬಸವಣ್ಣನವರ ಆತ್ಮಜ್ಞಾನವನ್ನು ಬಿಡದೆ, ಸಮಾಜತತ್ವಜ್ಞಾನವನ್ನು ಆಧರಿಸಿ ಬರೆದ ನಾಟಕವಾಗಿದೆ. ಅವರ ಸಮಗ್ರ ವ್ಯಕ್ತಿತ್ವಕ್ಕೆ ಬಿಡಿಸಿದ ದೃಶ್ಯರೂಪಕದ ವ್ಯಾಖ್ಯಾನವಿದು. ನಾಟಕದ ಮೊದಲನೆಯ ದೃಶ್ಯ ಬಾಗೇವಾಡಿಯ ಮಾದರಸ, ಮಾದಲಾಂಬಿಕೆಯ ಮನೆಯಿಂದ ಆರಂಭವಾಗುತ್ತದೆ. ಅಲ್ಲಿ ಬಸವಣ್ಣ ಮಂತ್ರಘೋಷದ ನಡುವೆ ತನ್ನ ಜನಿವಾರವನ್ನು ಹರಿದುಹಾಕಿ ತಾನು ಬ್ರಾಹ್ಮಣತ್ವದಿಂದ ಬಿಡುಗಡೆಗೊಂಡು ಕರ್ಮ ಮಾರ್ಗವ ತೊರೆದು, ಧರ್ಮ ಮಾರ್ಗ ಬಿಡುಗಡೆಗೊಂಡು ಮಾನವನಾಗುವ ಕಡೆಗೆ ಹೊರಳುವ ಗೊಂದಲದ, ಗದ್ದಲದ ಪರಿಸರದಲ್ಲಿ ನಾಟಕವು ಶುರುವಾಗುತ್ತದೆ. ಆ ಜನಿವಾರ ಬಸವಣ್ಣನಿಗೆ ಅಗ್ರಹಾರದ ಸಂಸ್ಕೃತಿಗೆ ಬಂಧಿಸುವ ದಾರವೆನಿಸಿದೆ. ಈ ದಾರ ಜ್ಞಾನವನ್ನು ಬೆಳೆಸುವುದರ ಸಂಕೇತ ಎಂದು ಪುರೋಹಿತರು ಎಷ್ಟು ಹೇಳಿದರೂ ಬಸವಣ್ಣ ಕೇಳುವುದಿಲ್ಲ. ಬಸವಣ್ಣನು ಜಾತಿಸೂಚಕವಾದ ಎಲ್ಲಾ ದಿಗ್ಬಂಧನಗಳನ್ನು ಧಿಕ್ಕರಿಸುತ್ತಾರೆ. ಸ್ತ್ರೀಯರ, ಶೂದ್ರರ ಉದ್ಧಾರ ಈ ಜನಿವಾರದಿಂದ ಸಾಧ್ಯವೇ? ಎಂದು ಪುರೋಹಿತರನ್ನು ಪ್ರಶ್ನಿಸುತ್ತಾನೆ. ಕೊನೆಗೆ ಜನಿವಾರವನ್ನು ಬಿಸಾಕಿ ಹೊರಟು ಹೋಗುತ್ತಾನೆ".[೧೧]

ಬಸವಣ್ಣ ತನ್ನ ಜನಿವಾರವನ್ನು ಹರಿದುಕೊಳ್ಳುವುದರ ಮೂಲಕ ನಾಟಕ ಆರಂಭವಾಗುತ್ತದೆ. ಶೈವ ಬ್ರಾಹ್ಮಣನಾಗಿ ಸಮಾಜಕ್ಕೆ ಅಜ್ಞಾನವನ್ನು ವಿಸ್ತರಿಸಲಾರೆ ಎಂದು ಬಸವಣ್ಣ ಜನಿವಾರವನ್ನು ತಿರಸ್ಕರಿಸುತ್ತಾನೆ. ಪುರೋಹಿತನ ಜೊತೆ ವಾದಕ್ಕಿಳಿಯುವ ಬಸವಣ್ಣ ಈ ಬ್ರಾಹ್ಮಣತ್ವದಿಂದ ಜ್ಞಾನ ಬೆಳೆಯಲಾರದು ಎಂದು ಹಾಗೂ ಇಂತಹ ಸಮಾಜವನ್ನು ನಾನೇ ಬಹಿಷ್ಕರಿಸುತ್ತೇನೆ ಎಂದು ದಿವ್ಯತನವನ್ನು ತೋರಿಸುತ್ತಾನೆ. ಮನೆ ಬಿಟ್ಟು ಹೊರಡಲು ಸಿದ್ಧನಾಗಿರುವ ಬಸವ ನಾಥ ಯೋಗಿಯಾಗಲು ಸಿದ್ಧನಾಗುತ್ತಾನೆ ಎಂದು ತಾಯಿ ಮಾದಲಾಂಬೆ ಗೋಳಿಡುತ್ತಾಳೆ. ಅಷ್ಟರಲ್ಲಿ ಅಗ್ರಹಾರದ ಮಂಟಪದಲ್ಲಿ ಬಸವನ ವಿಚಾರವಾಗಿ ಸಭೆ ಸೇರಿದ್ದಾರೆಂದು ಡಂಗೂರ ಸಾರಲಾಗುತ್ತದೆ. ಸಭೆಯಲ್ಲಿ ದೇವಭಟ್ಟರು ಬಸವಣ್ಣನಿಗೆ ಬಹಿಷ್ಕಾರ ಹಾಕುತ್ತಾರೆ. ಅಲ್ಲಿಗೆ ಬಂದ ಬಸವ ಮನುಸ್ಮೃತಿಯನ್ನು ಬೆಂಕಿಗೆ ಎಸೆದು ಅಲ್ಲಿಂದ ಕೂಡಲಸಂಗಮನ ಕಡೆಗೆ ಪಯಣ ಬೆಳೆಸುತ್ತಾನೆ. ಕೂಡಲ ಸಂಗಮಕ್ಕೆ ಬಂದು ಈಶಾನ್ಯ ಗುರುವಿನೊಂದಿಗೆ ವಿದ್ಯಾಭ್ಯಾಸದ ಕುರಿತು ಬಸವ ಮಾತನಾಡುತ್ತಾನೆ. ವಿದ್ಯಾಭ್ಯಾಸ ಎನ್ನುವುದು ಕರ್ಮರೂಪವಾಗಿದೆ. ನಾಥ ಮಠಗಳನ್ನು ಶೈವ ಸಂಘದವರು ಆಕ್ರಮಿಸಿ ಹೊಲಸೆಬ್ಬಿಸಿದ್ದಾರೆ. ನನಗೆ ಇಲ್ಲಿ ಉಸಿರು ಕಟ್ಟುವ ಅನುಭವ ಆಗುತ್ತಿದೆ ಎಂದು ವಾದಿಸುತ್ತಾನೆ. ಬಸವ ಹರಿವ ನೀರು ಕಂಡು "ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ" ಎಂಬ ಧ್ಯೇಯ ವಾಕ್ಯವಾಗಿಸಿ ಅದನ್ನು ಪಠಿಸುತ್ತಾನೆ.

ಕೂಡಲ ಸಂಗಮಕ್ಕೆ ಪಯಣ ಬೆಳೆಸಿದ ಬಸವ ಇಷ್ಟಲಿಂಗ ತತ್ವವನ್ನು ಪ್ರತಿಪಾದಿಸುತ್ತಾನೆ. ಮಠತತ್ವ ಬಿಟ್ಟು ಭಕ್ತ-ಭವಿ ತತ್ವ ಪ್ರಚುರಪಡಿಸಲು ಅನುವುಗೊಳಿಸುತ್ತಾನೆ. ಅಲ್ಲಿನ ವ್ಯವಸ್ಥೆಯ ನಾಯಕರು ಬಸವ ತತ್ವದಿಂದ ಬೇಸತ್ತು ಬಸವನನ್ನು ದಂಡಿಸುತ್ತಾರೆ. ಮಠದಲ್ಲಿ ಓದುವುದನ್ನು ನಿಲ್ಲಿಸುವ ಬಸವ

ದೇವಾಲಯಗಳ ನಿರಾಕರಣೆಯಾಗಬೇಕೆಂದು ನುಡಿಯುತ್ತಾನೆ. "ಕೂಡಲಸಂಗಮದ ಪಶುಪತಿಯೆ ತಪ್ಪಿತಸ್ಥ" ಎಂದು ಆರೋಪಿಸುವ ಬಸವನನ್ನು ಕರೆತಂದು "ಬಸವನೇ ತಪ್ಪಿತಸ್ಥ"ಎಂದು ಬರೆಸಿ ಪತ್ರಕ್ಕೆ ಸಹಿ ಹಾಕಿಸಿ ಸಂಗಮದಿಂದ ಬಸವನನ್ನು ಹೊರಹಾಕುತ್ತಾರೆ. ಬಸವ ಈಶಾನ್ಯ ಗುರುಗಳ ಸಲಹೆಯಂತೆ ಕಲ್ಯಾಣಕ್ಕೆ ಹೋಗಲು ಸಿದ್ಧನಾಗುತ್ತಾನೆ. ಕಲ್ಯಾಣಕ್ಕೆ ಪ್ರವೇಶಿಸುವ ಬಸವ ತನ್ನ ಮಾವ ಬಲದೇವನೊಂದಿಗೆ ಬಿಜ್ಜಳನನ್ನು ಸೇವೆ ಮಾಡುತ್ತಾನೆ. ಬಿಜ್ಜಳ ಬಸವನ ಆತ್ಮವಿಶ್ವಾಸ ಕಂಡು ರಾಜ್ಯದ ಭಂಡಾರಕ್ಕೆ ಮಹಾಗಣಾಧಿಪತಿಯನ್ನಾಗಿ ಮಾಡುತ್ತಾನೆ. ಬಸವ ಭಂಡಾರವನ್ನು ಸುಧಾರಿಸುತ್ತಾ ಸಾಗುತ್ತಾನೆ. ಎರಡು ವರ್ಷಗಳ ಬಳಿಕ ಬಸವ ಭಂಡಾರಿಯಾಗಿ ಅಧಿಕಾರ ವಹಿಸಿಕೊಳ್ಳುತ್ತಾನೆ. ಬಡವರಿಗೆ, ದಲಿತರಿಗೆ ಸಹಾಯ ಮಾಡಲು ತೊಡಗುತ್ತಾನೆ. ಬಸವ ಭಂಡಾರಿಯಾದ ಮೇಲೆ ಸಮಾಜ ಸುಧಾರಣೆ ಮಾಡುತ್ತಾನೆ. 'ಕಾಯಕತತ್ವ'ದ ಅರಿವನ್ನು ಜನರಲ್ಲಿ ಮೂಡಿಸುತ್ತಾನೆ. ಸತಿಸಹಗಮನದಂತಹ ಅನಿಷ್ಟ ಪದ್ಧತಿಯನ್ನು ತಿರಸ್ಕರಿಸಿ ರಾಜ್ಯದಲ್ಲಿ ಆ ಪದ್ಧತಿಗೆ ಜಾಗವಿಲ್ಲದಂತೆ ಮಾಡುತ್ತಾನೆ. ಶೂದ್ರರ ಮನೆಯಲ್ಲಿ ಊಟ ಮಾಡಿ 'ಸಾಮಾಜಿಕ ತತ್ವಕ್ಕೆ' ಶರಣಾಗುತ್ತಾನೆ. ಬಸವನ ತತ್ವಗಳನ್ನು ಮೆಚ್ಚಿದ ಬಿಜ್ಜಳನ ತಂಗಿ ನೀಲಲೊಚನೆ ಬಸವನನ್ನು ಮದುವೆಯಾಗುತ್ತಾಳೆ. ಇದೇ ಸಮಯದಲ್ಲಿ ಬಸವಣ್ಣನು ಹರಳಯ್ಯ ಮತ್ತು ಮಧುವರಸರ ಮಾತುಕೇಳಿ ವರ್ಣಸಂಕರದ ಮದುವೆ ಮಾಡಿಸುತ್ತಾನೆ.

ಮಹಾಜ್ಞಾನಿಯಾದ ಅಲ್ಲಮನನ್ನು ಶೂನ್ಯ ಸಿಂಹಾಸನಾಧೀಶನನ್ನಾಗಿ ನೇಮಿಸಿದ ಮೇಲೆ ಶೈವ ಮಠಾಧೀಶರ ಪ್ರತಿಭಟನೆ ಪ್ರಾರಂಭವಾಗುತ್ತದೆ. ಶೂದ್ರನಾದ ಅಲ್ಲಮನನ್ನು ಪೀಠಾಧಿಪತಿಯಾಗಿ ಕೂಡಿಸಿದ್ದು ತಪ್ಪು ಎಂದು ವಾದಿಸುತ್ತಾರೆ. ಈ ದೂರಿನ ಜೊತೆಯಲ್ಲಿ ವರ್ಣಸಂಕರದ ಮದುವೆಯನ್ನು ಮಾಡಿಸಿದ್ದು ತಪ್ಪೆಂದು ಬಿಜ್ಜಳನಲ್ಲಿ ದೂರು ನೀಡುತ್ತಾರೆ. ವಿಚಾರಣೆಯನ್ನು ಪ್ರಾರಂಭಿಸುವ ಬಿಜ್ಜಳ ಬಸವನ ವಿರುದ್ಧವಾಗಿ ನಿರ್ಣಯ ನೀಡುತ್ತಾನೆ. ಅಧಿಕಾರ ಆಸೆಯುಳ್ಳವನಾಗಿ ಬಿಜ್ಜಳ ಪುರೋಹಿತಶಾಹಿ ವರ್ಗದವರ ಮಾತುಕೇಳಿ ಬಸವನನ್ನು ಗಡಿಪಾರು ಮಾಡುತ್ತಾನೆ.

ಬಸವನ ಬಾಲ್ಯದಿಂದ ಅಂತ್ಯದವರೆಗೂ ಈ ನಾಟಕವು ಬಸವನ ಜೀವನ ಚರಿತ್ರೆಯ ಹಾಗೆ ಕಾಣಿಸುತ್ತದೆ. ಬಸವನ ಹುಟ್ಟನ್ನು ತಿಳಿಸುವ ಈ ನಾಟಕವು ಬಸವನ ಅಂತ್ಯವನ್ನು ಎಲ್ಲಿಯೂ ಪ್ರಸ್ತಾಪಿಸುವುದಿಲ್ಲ. ಅಂದಿನ ಸಮಾಜದಲ್ಲಿ ಇದ್ದ ಕೆಲವಾರು ಪದ್ಧತಿಗಳ ಬಗೆಗೆ ನಾಟಕ ಮಾಹಿತಿಯನ್ನು ಕೊಡುತ್ತದೆ.

ಉದಾ: ದನಗಾಹಿ, ಸತಿಸಹಗಮನ, ಸಂಭೋಳಿ, ವೇಶ್ಯಾ ಪದ್ಧತಿ ಇಂತಹ ಪದ್ಧತಿಗಳು ಸಮಾಜಕ್ಕೆ ಘಾತುಕಗಳು ಎಂಬಂತೆ ಬಸವ ವಾದಿಸುತ್ತಾನೆ. ಬಿಜ್ಜಳನ ತಂಗಿಯನ್ನೇ ಮದುವೆಯಾಗುವ ಬಸವಣ್ಣ ಅನ್ಯಜಾತಿಗಳ ನಡುವೆ ಮದುವೆ ನಡೆಯಬೇಕೆಂಬ ತತ್ವಕ್ಕೆ ಶ್ರೀಕಾರ ಹಾಕುತ್ತಾನೆ. ವರ್ಣಸಂಕರದ ಮದುವೆ ನಡೆಸುವುದರೊಂದಿಗೆ ಸಮಾಜದ ಸಂಪೂರ್ಣ ಬದಲಾವಣೆಗೆ ನಾಂದಿ ಹಾಕುವಲ್ಲಿ ಬಸವ ಹೊಸ ಹೆಜ್ಜೆ ಇಡುತ್ತಾನೆ. ತನ್ನ ಎಳೆ ವಯಸ್ಸಿನಲ್ಲಿಯೇ ಕ್ರಾಂತಿಕಾರಿಯಂತೆ ಜನಿವಾರವನ್ನು ಹರಿದುಕೊಳ್ಳುವುದರ ಮೂಲಕ ಹೊಸ ಇತಿಹಾಸಕ್ಕೆ ಬಸವ ಮೊದಲ ಹೆಜ್ಜೆ ಇಡುತ್ತಾನೆ. ಜನಿವಾರದ ಸಂಪ್ರದಾಯ ಮಾನವತಾವಾದಕ್ಕೆ ಪೂರಕ ಎಂಬುದು ಬಸವನ ಅಭಿಪ್ರಾಯ. ಕೂಡಲಸಂಗಮದಿಂದ ಕಲ್ಯಾಣಕ್ಕೆ ತೆರಳುವ ಬಸವ ಬಿಜ್ಜಳನ ಆಶ್ರಯದಲ್ಲಿ ಅನೇಕ ಸಾಮಾಜಿಕ ಸುಧಾರಣೆಗಳನ್ನು ತರುತ್ತಾನೆ. ಬಿಜ್ಜಳನ ಹದಗೆಟ್ಟ ಭಂಡಾರದ ಸ್ಥಿತಿಯನ್ನು ಸುಧಾರಿಸುತ್ತಾನೆ. ಬಸವಣ್ಣನ 'ಕಾಯಕವೇ ಕೈಲಾಸ' ಎಂಬ ಧ್ಯೇಯ ವಾಕ್ಯವನ್ನು ಕಲ್ಯಾಣದಲ್ಲಿ ಪ್ರಚುರಪಡಿಸುತ್ತಾನೆ. ಕಾಯಕ ತತ್ವವನ್ನು ಎಲ್ಲರೂ ಪಾಲಿಸುವಂತಾಗುತ್ತಾರೆ.

ಬಸವನ ಕಾರ್ಯಸಾಧನೆಗೆ ಮೆಚ್ಚಿದ ಬಿಜ್ಜಳ ಬಸವನಿಗೆ ಭಂಡಾರಿ ಪದವಿಯನ್ನು ಬಳಸಿಕೊಳ್ಳುವ ಬಸವ ದೀನದಲಿತರಿಗೆ ಭಂಡಾರದಿಂದ ಹಣದ ಸಹಾಯವನ್ನು ಮಾಡುತ್ತಾನೆ. ಬಿಜ್ಜಳ ತನ್ನ ಹೆಂಡತಿ ರಂಭಾವತಿಯ ಜೊತೆಯಲ್ಲಿ ಮಾತನಾಡುವಾಗ ಬಸವನಲ್ಲಿ ತಾನು ತನ್ನ ಅಭಿವೃದ್ಧಿಗೋಸ್ಕರ ಬಳಸಿಕೊಳ್ಳುತ್ತಾನೆ ಎಂಬ ನೇರ ನುಡಿಯನ್ನು ಆಡುತ್ತಾನೆ. ಬಿಜ್ಜಳನಿಗೆ ಸಮಾಜದ ಸುಧಾರಣೆಗಿಂತ ತನ್ನ ಮಾನ್ಯತೆ ಹಾಗೂ ತನ್ನ ಭಂಡಾರ ಬೆಳೆಯುವುದು ಮುಖ್ಯವಾಗುತ್ತದೆ. ಆದ್ದರಿಂದ ಬಸವನ ಮೊದಮೊದಲು ಕೆಲಸಗಳಿಗೆ ಬಿಜ್ಜಳ ಸಹಕಾರಿಯಾಗಿ ನಿಲ್ಲುತ್ತಾನೆ ಮತ್ತು ಬೇಕಾದ ವ್ಯವಸ್ಥೆಗಳನ್ನು ಕಲ್ಪಿಸಿಕೊಡುತ್ತಾನೆ.

ದನಗಾಹಿ ಬಂದು ಬಸವಣ್ಣನಿಗೆ ತಮ್ಮ ದನಗಳನ್ನು ವೈರಿಗಳು ಕದ್ದು ಒಯ್ದರು ಎಂದರೆ ಕರುಗಳನ್ನು ಅವರಿಗೆ ನೀಡಿ ಬಾ ಎಂದು ಹೇಳುತ್ತಾನೆ. ಬಸವನಿಗೆ ಯುದ್ಧ ಎನ್ನುವುದು ಮಾನವರ ನಾಶಕ್ಕಾಗಿಯೇ ಹೊರತು ಮಾನವನ ಕಲ್ಯಾಣಕ್ಕಲ್ಲ ಎಂದು ಭಾವಿಸಿರುವರು. ಯುದ್ಧದಿಂದ ಕುಟುಂಬಗಳು ನಾಶವಾಗುತ್ತವೆ. ಶಾಂತಿ, ನೆಮ್ಮದಿ ಎನ್ನುವುದು ಯುದ್ಧವನ್ನು ತೊರೆದಾಗ ಮಾತ್ರ ದೊರಕುವಂತದ್ದು ಎಂದು ದನಗಾಹಿಗೆ ತಿಳಿಸಿ ಯುದ್ಧ ಕೇವಲ ಜನಗಳ ಬಲಿಗೈಯುತ್ತದೆ. ಆದ್ದರಿಂದ ಕರುಗಳನ್ನು ಅವರಿಗೆ ನೀಡಿ ಬಾ ಎನ್ನುತ್ತಾನೆ. ದಾಸೋಹ ತತ್ವವನ್ನು ಪ್ರತಿಪಾದಿಸುವ ಬಸವ ಕಲ್ಯಾಣದ ಜನರನ್ನು ಮೊದಲಿಗೆ ಕಾಯಕ ವ್ಯಕ್ತಿಗಳನ್ನಾಗಿ ಮಾಡುತ್ತಾನೆ. ಕಾಯಕದಿಂದ ಗಳಿಸಿದ ಹಣ, ದವಸ-ಧಾನ್ಯಗಳೆಲ್ಲದರ ಮೇಲೆ ಯಾವತ್ತಿಗೂ ತಾನು ಅಧಿಕಾರವನ್ನು ಪಡೆಯಲಾಗದೆಂದು ಶರಣರಿಗೆ ಭೋಧಿಸುತ್ತಾನೆ.

ಮಾರಸಿಂಗ ದಂಡನಾಯಕರ ಸಾವಿನ ನಂತರ ವೇಳೆವಾಳಿಯ ವ್ಯಕ್ತಿ ಶಂಕಪಯ್ಯ ಸ್ವಾಮಿನಿಷ್ಠೆಗಾಗಿ ರುಂಡ ಕತ್ತರಿಸಿಕೊಂಡುದ್ದರಿಂದ ಅವನ ಹೆಂಡತಿಯರು ಸತಿಸಹಗಮನದ ಪದ್ಧತಿಯನ್ನು ಆಚರಿಸಲು ಮುಂದಾಗುತ್ತಾರೆ. ಅವರನ್ನು ತಡೆಯುವ ಬಸವ ಸ್ತ್ರೀ ಶೋಷಣೆಯ ವಿರುದ್ಧ ನಿಲ್ಲುತ್ತಾನೆ. ಸ್ತ್ರೀಯರಿಗೂ ಬದುಕುವ ಹಕ್ಕಿದೆ, ಅವಳಿಗೂ ಮನಸ್ಸಿದೆ ಎಂಬ ವರವನ್ನು ತಂದು ಪುರುಷನ ಸಮಾನವಾಗಿ ಸ್ತ್ರೀಯೂ ಕೂಡ ನಿಲ್ಲಬೇಕೆಂಬ ತತ್ವವನ್ನು ಪ್ರತಿಪಾದಿಸುತ್ತಾನೆ. ಸ್ತ್ರೀ-ಪುರುಷರಿಬ್ಬರೂ ಸಮಾನರು, ಹೆಂಡತಿ ಸತ್ತಾಗ ಗಂಡ ಹೇಗೆ ಮತ್ತೊಂದು ಮದುವೆಯಾಗುತ್ತಾನೆಯೋ ಅದೇ ರೀತಿ ಗಂಡ ಸತ್ತಾಗ ಹೆಂಡತಿಯು ಮರುಮದುವೆಯಾಗಬೇಕು ಎಂದು ಬಸವ ತತ್ವ ಪ್ರತಿಪಾದಿಸುತ್ತದೆ.

ಸಂಬೋಳಿ ಪದ್ಧತಿಯನ್ನು ವಿರೋಧಿಸುವ ಬಸವ ವಿಶ್ವ ಮಾನವೀಯ ನೆಲೆಯಲ್ಲಿ ಹೊಲೆಯರ ಬದುಕನ್ನು ಅನಾವರಣಗೊಳಿಸುವ ವ್ಯಕ್ತಿಯನ್ನಾಗಿ ನಾಟಕಕಾರರು ಚಿತ್ರಿಸಿದ್ದಾರೆ. ಸಂಬೋಳಿ..... ಎಂದು ಕೂಗುತ್ತಾ ಬರುವ ಹುಡುಗನನ್ನು ಸಂತೈಸಿ, ನಂತರ ಹೊಲೆಯರ ಕೇರಿಗೆ ಹೋಗುವ ಬಸವ ಅಲ್ಲಿದ್ದು ನಾಗಿಮಯ್ಯನನ್ನು ಶಿವನಾಗಿಮಯ್ಯನೆಂದು ಸಂಭೋಧಿಸಿ ಅವನ ಮನೆಯಲ್ಲಿ ಊಟವನ್ನು ಮಾಡುವುದರ ಮೂಲಕ ಜಾತೀಯತೆಯನ್ನು ವಿರೋಧಿಸುತ್ತಾನೆ. ಬಿಜ್ಜಳನ ದೃಷ್ಟಿಕೋನವನ್ನು ತಿರಸ್ಕರಿಸುವ ನೀಲಲೋಚನೆ ಬಸವನ್ನು ಮದುವೆಯಾಗಿ ಜಾತಿ-ಜಾತಿಗಳ ನಡುವಿನ ತೊಡಕಿನ ಹೋಗಲಾಡಿಸಲು ಪ್ರಯತ್ನಿಸುತ್ತಾಳೆ. ಬಸವನ ಸಮಾನತೆಯ ತತ್ವವು ಅವಳು ಬಸವನನ್ನು ಮದುವೆಯಾಗಲು ಪ್ರೇರಣೆಯಾಗುತ್ತದೆ.

ವರ್ಣಸಂಕರದ ಮದುವೆಯೊಂದೇ ಜಾತಿವಿನಾಶಕ್ಕೆ ಕಾರಣವೆಂದು ಬಸವ ಭಾವಿಸುತ್ತಾನೆ. ಹರಳಯ್ಯ ಮತ್ತು ಮಧುವರಸರ ಮಕ್ಕಳ ಮದುವೆಯಿಂದಾಗಿ ಜಾತಿಗಳು ನಾಶವಾಗುತ್ತವೆ. ಯಾವಾಗ ಜಾತಿಗಳಿರುವುದಿಲ್ಲವೋ ಆಗ ಅಸಮಾನತೆ ಎನ್ನುವುದು ದೂರ ಸರಿಯುತ್ತದೆ. ಅಸಮಾನತೆ ದೂರ ಸರಿದಂತೆ ಶ್ರೀಮಂತ-ಬಡವ ಎಂಬ ತಾತ್ಸಾರವೇ ಇರುವುದಿಲ್ಲ. ಮಾನವತ್ವಸಮಾಜಮುಖಿಯಾಗಿ ಚಲಿಸಲು

ಸಾಧ್ಯವಾಗುತ್ತದೆಂದು ಬಸವ ವರ್ಣಸಂಕರದ ಮದುವೆಗೆ ಬೆಂಬಲ ನೀಡುತ್ತಾನೆ. ಶೂದ್ರನಾದ ಅಲ್ಲಮನನ್ನು ಮಹಾಮನೆಯ ಶೂನ್ಯ ಸಿಂಹಾಸನದ ಮೇಲೆ ಕೂರಿಸುವುದರ ಮೂಲಕ ಜ್ಞಾನಿಯಾದವನು ಯಾವ ಜಾತಿಯಾದರೇನು?ಅವನಿಗೆ ಸಿಗಬೇಕಾದ ಸ್ಥಾನ ಸಿಕ್ಕೇ ಸಿಗುತ್ತದೆ ಎಂದು ತೋರಿಸಲು ಹಾಗೂ ಕೆಳಜಾತಿಯವರ ಅಡಿಯಲ್ಲಿ ಮೇಲ್ಜಾತಿಯವರು ಬೋಧನೆಗೆ ಒಳಗಾದಾಗ ಅಸಮಾನತೆ ತತ್ವ ಹೋಗುವುದೆಂದು ಅಲ್ಲಮನನ್ನು ಶೂನ್ಯ ಪೀಠದ ಮೇಲೆ ಕೂಡಿಸುವನು.

ಈ ನಾಟಕವು ಬಸವನ ಪಾತ್ರವನ್ನು ಕ್ರಾಂತಿಕಾರಿಯ ವ್ಯಕ್ತಿಯನ್ನಾಗಿ ಸಾಗಿಸುತ್ತದೆ. ಬಸವಣ್ಣನು ಸಮಾಜವನ್ನು ಬದಲಿಸಿ ಕೊನೆ ಗೆ ಅಸಹಾಯಕನಾಗಿ ನಿಲ್ಲುವ ವ್ಯಕ್ತಿಯನ್ನಾಗಿ ನಾಟಕಕಾರರು ಚಿತ್ರಿಸಿದ್ದಾರೆ. ಈ ನಾಟಕದಲ್ಲಿ ತತ್ವಗಳ ಘಟನೆ ಕಂಡುಬರುವುದಿಲ್ಲ. ಧಾರ್ಮಿಕ, ಸಾಮಾಜಿಕ, ಆರ್ಥಿಕ ಸುಧಾರಣೆಗಳು ಮಾತ್ರ ಮುಖ್ಯ ನೆಲೆಯಲ್ಲಿ ಕಾಣಸಿಗುತ್ತದೆ. 'ಕೆಟ್ಟಿತ್ತು ಕಲ್ಯಾಣ' ಎಂಬ ಶೀರ್ಷಿಕೆಯ ನಾಟಕದ ಇಡೀ ಕಥಾ ವಸ್ತುವನ್ನು ತಿಳಿಸುತ್ತದೆ. ಬಸವನಿಲ್ಲದೇ ಕಲ್ಯಾಣ ಹದಗೆಟ್ಟಿತ್ತು. ಬಸವನಿಗಾಗಿ ಕಲ್ಯಾಣ ಕಾಯುತ್ತಲಿತ್ತು. ಬಸವ ಬಂದು ಹೋದ ನಂತರ ಮತ್ತೆ ಕಲ್ಯಾಣ ಹಾಳಾಯಿತು ಎಂಬ ಅರಿವನ್ನು ಶೀರ್ಷಿಕೆ ನೀಡುತ್ತದೆ. ಕಲ್ಯಾಣ ಬಸವನಿಗಾಗಿ ಎದುರು ನೋಡುತ್ತಿತ್ತು. ಬಸವ ಬಂದು ಕಲ್ಯಾಣವನ್ನು ಉದ್ಧರಿಸಿದ, ಆದರೆ ಬಸವ ಕಲ್ಯಾಣವನ್ನು ತೊರೆದ ಮೇಲೆ ಮತ್ತೊಮ್ಮೆ ಕಲ್ಯಾಣ ಹಳೆಯ ಕಲ್ಯಾಣವಾಯಿತು. ಆದ್ದರಿಂದ ಬಸವನಿಲ್ಲದ ಕಲ್ಯಾಣ ಸದಾಕಾಲ ಕೆಟ್ಟಿತ್ತು. ಆದ್ದರಿಂದ ಶೀರ್ಷಿಕೆಯ ಹೊಂದಿಕೆಯಾಗುತ್ತದೆ.

ಡಾ.ಸಿದ್ಧಯ್ಯ ಪುರಾಣಿಕರ 'ಆತ್ಮಾರ್ಪಣ' ಎಂಬ ನಾಟಕದಲ್ಲಿ ನಾಟಕಕಾರರು ಬಸವಣ್ಣನನ್ನು ನೋಡಿರುವ ಬಗ್ಗೆ ದೈವೀಕರಿಸಿದ ಹಿನ್ನೆಲೆಯಲ್ಲಿ ಈ ನಾಟಕ ಒಳಗೊಂಡಿದೆ. ನಾಟಕಕಾರರು ಬಸವಣ್ಣನನ್ನು ಬಾಲ್ಯದಿಂದಲೇ ಆತನ ಸರ್ವಜನಾಂಗಕ್ಕೆ ಹಿತವನ್ನು ಉಂಟು ಮಾಡುವಂತಹ ವ್ಯಕ್ತಿಯಾಗಿ ಸೃಷ್ಟಿಸಿದ್ದಾರೆ. ಬಸವಣ್ಣ ೬ ವರ್ಷಇರುವಾಗಲೇ ಉಪನಯನ ಕಾರ್ಯಕ್ರಮವನ್ನು ತಿರಸ್ಕರಿಸುತ್ತಾನೆ. ಬಸವಣ್ಣನು ಜಾತಿಯ ಪರಿಕಲ್ಪನೆಯನ್ನು ಮೀರಿದ್ದಾನೆ. ಈ ಕೆಳಗಿನ ಮಾತುಗಳನ್ನು ನೋಡಿದರೆ,

"ಬಸವ : ಅಪ್ಪಾ, ಇಂದು ಮನೆಯಲ್ಲಿ ವಿಶೇಷ ಸಂಭ್ರಮವೇಕೆ?

ಮಾದರಸ: ನಿನಗೆ ಗೊತ್ತಿಲ್ಲವೇ ಮಗು? ನಿನ್ನ ಉಪನಯನ ಸಂಸ್ಕಾರ ಇಂದು. ನಿನಗಿಂದು ದ್ವಿಜತ್ವ ಪ್ರಾಪ್ತವಾಗುವುದು.

ಬಸವ : ಇಂದು ನಾನು ಬ್ರಾಹ್ಮಣನಾಗುವೆನಾದರೆ ಇದುವರೆಗೆ ನಾನಾವ ಜಾತಿಯವನಿದ್ದೆ?

ಮಾದರಸ: ಇದುವರೆಗೂ ನೀನು ಶೂದ್ರನೆಂದೇ ಗಣಿಸಲ್ಪಡುವಿ ಕುಮಾರ, ಜನ್ಮದಿಂದೆಲ್ಲರೂ ಶೂದ್ರರಾಗಿಯೇ ಹುಟ್ಟುತ್ತಾರೆ. ಸಂಸ್ಕಾರ ಬಲದಿಂದ ದ್ವಿಜತ್ವವು ಪ್ರಾಪ್ತವಾಗುತ್ತದೆ.

ಬಸವ : ಅಪ್ಪಾ ಯಾವ ಕುಲದವನೇ ಆಗಲಿ, ಸಂಸ್ಕಾರ ಬಲದಿಂದ ಬ್ರಾಹ್ಮಣನಾಗಬಹುದೇ?

ಮಾದರಸ: ಎಲ್ಲರೂ ಬ್ರಾಹ್ಮಣರು ಹೇಗಾಗಬಲ್ಲರು? ಕೇವಲ ಬ್ರಾಹ್ಮಣ ಕುಲೋತ್ಪನ್ನರಾದ ಬಾಲಕರು ಮಾತ್ರ ಸಂಸ್ಕಾರ ಬಲದಿಂದ ಬ್ರಾಹ್ಮಣ್ಯವನ್ನು ಪಡೆಯುತ್ತಾರೆ.

ಬಸವ : ಬ್ರಾಹ್ಮಣ ಕುಮಾರರ ಶೂದ್ರತ್ವವನ್ನು ಕಳೆದು ಅವರಿಗೆ ದ್ವಿಜತ್ವವನ್ನು ತಂದುಕೊಡುವಲ್ಲಿ ಈ ಉಪನಯನ ಸಂಸ್ಕಾರವು ಸರ್ವಜಾತಿಯ ಸಕಲ ಜೀವಾತ್ಮರಿಗೆ ಬ್ರಾಹ್ಮಣವನ್ನೇಕೆ ತಂದುಕೊಡಬಾರದು?

ತಿರುಕ : ಬಸವರಸರೆ, ಸಂಸ್ಕಾರ ಬಲದಿಂದ ಎಲ್ಲರೂ ಬ್ರಾಹ್ಮಣರು ಹೇಗಾಗುತ್ತಾರೆ? ಶಾಸ್ತ್ರಗಳು ಸಾರುವಂತೆ ಬ್ರಾಹ್ಮಣರು ಪರಮಾತ್ಮನ ಮುಖದಿಂದಲೂ, ಕ್ಷತ್ರಿಯರು ಬಾಹುಗಳಿಂದಲೂ, ವೈಶ್ಯರು ತೊಡೆಗಳಿಂದಲೂ, ಶೂದ್ರರು ಪಾದಗಳಿಂದಲೂ ಹುಟ್ಟಿರುವಾಗ......

ಬಸವ : ಸಾಕು ಪುರೋಹಿತರೇ ಮನುಷ್ಯತ್ವದ ಅವಹೇಳನ!"[೨]

ನಾಟಕಕಾರರಾದ ಸಿದ್ಧಯ್ಯ ಪುರಾಣಿಕರು ಜಾತಿಯ ಪರಿಕಲ್ಪನೆಯನ್ನು, ಕುಲದ ಪರಿಕಲ್ಪನೆಯನ್ನು ಬಸವಣ್ಣನ ಮಾತಿನಿಂದಲೇ ಹೇಳಿದ್ದಾರೆ. ಬಸವಣ್ಣನ ತತ್ವ, ಸಿದ್ಧಾಂತಗಳನ್ನು ವಿಶ್ವಜ್ಯೋತಿ ಬಸವಣ್ಣನ ಬಾಯಿಂದಲೇ ಹೇಳಿಸಿರುವುದು ವಿಶೇಷವೆನಿಸುತ್ತದೆ. ನಾಟಕಕಾರರು ಬಸವಣ್ಣನ ಮದುವೆಯ ಪ್ರಸಾದದಲ್ಲಿ ವಚನಗಳನ್ನು ತೆಗೆದುಕೊಂಡಿದ್ದಾರೆ.

ಹಗೆಯಲ್ಲಿ ಬಿದ್ದವರ ಮೇಲೆ ಒರಳ ನೂಕುವರೆ?
ಕೊಳದ ಮೇಲೆ ಸಂಕೋಲೆಯನ್ನಿಕ್ಕುವರೆ?
ಬೆಂದ ಹಣ್ಣು ಕಂಬಿಯಲ್ಲಿ ಕೀಸುವರೆ?
ಕೂಡಲಸಂಗಯ್ಯ ಕಾಡುವ ಕಾಟ ಸಿರಿಯಾಳಂಗಲ್ಲದೆ ಸೈರಿಸಬಹುದೇ? ದೇವಾ
ಸಿರಿಯಾಳ ತಂಗಳೆಯರು ಹೋದಹಾದಿಯಲ್ಲಿ ನಾನು ಹೋಗಬಹುದೆ?
ಆನೆ ಆ ಹಾದಿಯಲ್ಲಿ ಹೋಯಿತ್ತೆಂದರೆ ಆಡು ಆ ಹಾದಿಯಲ್ಲಿ ಹೋಗುವುದೆ?
ನಿಮ್ಮ ಕರುಣದ ಕಂದನಿಗೆ ದೋಷವೆಲ್ಲಿದೆಯೋ ದುರಿತವೆಲ್ಲಿಯದೋ ಸಂಗಯ್ಯ?
ಲಗ್ನವೆಲ್ಲಿಯದೋ ವಿಘ್ನವೆಲ್ಲಿಯದೋ ಸಂಗಯ್ಯ?
ನಿಮ್ಮ ಮಾಣದೇ ನೆನೆವಂಗೆ ಭವ ಕರ್ಮವೆಲ್ಲಿಯದೋ ಕೂಡಲ ಸಂಗಮದೇವಾ?
ಆದರೆ ತಮ್ಮ ಪಾವನ ಪದ ಪದ್ಮಗಳನ್ನಗಲಿ ಹೋಗಲು ಮನವೊಪ್ಪದು ತಂದೆ?

ನಾಟಕಕಾರರು ಬಸವಣ್ಣನನ್ನು ಗೌರವದ ಮೂರ್ತಿಯನ್ನಾಗಿ ನೋಡಿದ್ದಾರೆ. ಬಿಜ್ಜಳನು ದಯ ಮಾಡಿಸಿರಿ ಬಸವಣ್ಣ ಈ ಆಸನವನ್ನು ಅಲಂಕರಿಸಿರಿ. ಸಿದ್ಧರಸ ನಾಯಕರಿಂದ ತಮ್ಮ ವಿಷಯ ತಿಳಿದು ಆತ್ಮಾನಂದವಾಯಿತು- ತಮ್ಮ ಅಗಾಧವಾದ ಪಾಂಡಿತ್ಯಕ್ಕೆ ಪ್ರತಿಯಿಲ್ಲವಂತೆ ಎಂದಾಗ ಬಸವಣ್ಣನು "ಮಹಾರಾಜರು ನನ್ನನ್ನು ಹೊಗಳಿ ಹೊನ್ನ ಶೂಲಕ್ಕೇರಿಸಬಾರದು! ಶರಣರಶಿಸು ನಾನು, ಭಕ್ತರ ಮನೆಯ ಬಳಗದೊತ್ತು ನಾನು, ಎನಗಿಂತ ಕಿರಿಯರಿಲ್ಲ! ಬಸವಣ್ಣನು ಹಿರಿಯರನ್ನು ಗೌರವದಿಂದ ಕಾಣುವ ಪರಿಯನ್ನು ತಿಳಿಸಿದ್ದಾರೆ.

ಸಿದ್ಧಯ್ಯ ಪುರಾಣಿಕರು ನೋಟ-೨ರಲ್ಲಿ ಬಸವಣ್ಣನ ತತ್ವಗಳನ್ನು ಗಂಡ-ಹೆಂಡತಿಯರ ಸಂಭಾಷಣೆಯಲ್ಲಿ ಸವಿಸ್ತಾರವಾಗಿ ತಂದಿದ್ದಾರೆ. ಮೂಢನಂಬಿಕೆಯನ್ನು ವಿರೋಧಿಸುವ ನೆಲೆಯಲ್ಲಿ ಬಸವಣ್ಣ ಬರುತ್ತಾನೆ. ಕಲ್ಲು ನಾಗರ ಪೂಜೆ ಸಂದರ್ಭದಲ್ಲಿ ನಿಜವಾದ ಹಾವು ಬಂದಾಗ ಅದನ್ನು ಕಲ್ಲು ನಾಗರದಿಂದ ಅದನ್ನು ಹೊಡೆದು ಸಾಯಿಸುತ್ತಾನೆ. ಆಗ ಬಸವಣ್ಣನು

"ಹುತ್ತವ ಬಡಿದರೆ, ಹಾವು ಸಾಯಬಲ್ಲುದೇ ಅಯ್ಯಾ?
ಘೋರ ತಪವ ಮಾಡಿದೊಡೇನು?
ಅಂತರಂಗ ಆತ್ಮ ಶುದ್ಧವಿಲ್ಲದವರನೆಂತು
ನಂಬುವನಯ್ಯ ಕೂಡಲಸಂಗಮದೇವ?
ಕಲ್ಲನಾಗರ ಕಂಡರೆ ಹಾಲನೆರೆಯೆಂಬರು,
ಉಂಬ ಜಂಗಮ ಬಂದಡೆ ನಡೆ ಎಂಬರು
ಉಣ್ಣದ ಲಿಂಗಕ್ಕೆ ಬೋನವ ಹಿಡಿ ಎಂಬವರಯ್ಯ!
ನಮ್ಮ ಕೂಡಲಸಂಗಯ್ಯನ ಶರಣರ ಕಂಡು
ಉದಾಸೀನ ಮಾಡಿದರೆ ಕಲ್ಲುತಾಗಿದ ಮಿಟ್ಟೆಯಂತಪ್ಪರಯ್ಯಾ...."[೧೩]

ಈ ನಾಟಕದಲ್ಲಿ ಗಂಡ-ಹೆಂಡತಿಯರಿಗೆ ಹೇಳುವ ಮಾತು ಸರ್ವಲೋಕಕ್ಕೆ ಹೇಳುವಂತಿದೆ. ಅಯ್ಯಾ ಕಾಳಸರ್ಪವನ್ನು ಪೂಜಿಸುವುದರಿಂದ ಯಾರಿಗಾದರೂ ಮುಕ್ತಿಯಾಗುವುದೇ? ಕಲ್ಲು ನಾಗರಕ್ಕೆ ಹಾಲನ್ನು ಎರೆದು ನಿಜವಾದ ಹಾವನ್ನು ಕೊಲ್ಲುವುದು ಎಂತಹ ಅಪಹಾಸ್ಯದ ಮಾತು ಎಂದು ಪ್ರಶ್ನಿಸುತ್ತಾನೆ. ಅಲ್ಲದೇ ಅದನ್ನು ಬಿಟ್ಟು ಲಿಂಗದೇವನನ್ನು ಪೂಜಿಸಿದರೆ ಇಲ್ಲಿ ಸುಖವೂ ಅಲ್ಲಿ ಮುಕ್ತಿಯೂ ಲಭಿಸುತ್ತದೆ ಎನ್ನುತ್ತಾನೆ.

ಗಂಡ-ಹೆಂಡತಿಯನ್ನು ಬದಲಾವಣೆ ಮಾಡಿದ್ದು ಸರ್ವಲೋಕವನ್ನು ಬದಲಾವಣೆಯ ನಿಟ್ಟಿನಲ್ಲಿ ಹೊಯ್ದಂತೆ ಇದೆ.

ಎಂಥಾ ಬಸವಣ್ಣ! ಜಗವಣ್ಣ! ಎಂಥಾತ ಬಸವಣ್ಣ
ಚಿಂತೆಯ ಕಳೆಯುತ ಶಾಂತಿಯ ನೀಡಿದ
ಬಡವ ಬಗ್ಗರ ಕೈಯ ಪ್ರೀತಿ ಹಿಡಿದು ಮೇಲೆತ್ತುವಾತ
ಕೆಡಕು ಹಾದಿಯ ಬಿಡಿಸಿ ಒಡನೇ ಲಿಂಗಕೊಟ್ಟ ॥

ನೋಟ-೪ರಲ್ಲಿ ಬಸವಣ್ಣನು ಕಳ್ಳರನ್ನು ಬದಲಾವಣೆ ಮಾಡಿದ ದೃಶ್ಯವನ್ನು ಕಾಣುತ್ತೇವೆ. ಇಲ್ಲಿ ಬಸವಣ್ಣನ ವಚನವಿರುತ್ತದೆ.

ಹೊಯ್ದವರನ್ನ ಹೊರೆದವರೆಂಬೆನು
ಬೈಯ್ದವರೆನ್ನ ಬಂಧುಗಳೆಂಬೆನು
ಹೊಗಳಿವರೆನ್ನ ಹೊನ್ನ ಶೂಲದಲ್ಲಿಟ್ಟವರು ಕೂಡಲಸಂಗಮದೇವ!
ಊರಮುಂದೆ ಹಾಲ ಹಳ್ಳ ಹರಿಯುತ್ತಿರಲಿ
ವಾಳಿಯಾವಿನ ಬೆನ್ನಹರಿಯಲದೇಕಯ್ಯ?
ಲಜ್ಜೆಗೆಡಲೇಕೆ? ನಾಣುಗೆಡಬೇಕೆ?

ಬಸವಣ್ಣನ ಹೆಂಡತಿ ನೀಲಾಂಬಿಕೆ ಕಳ್ಳರು ಎಂದು ಚೀರಿದಾಗ ಬಸವಣ್ಣನು ಆಭರಣಗಳನ್ನು ಕೊಡದೇ ಕೈಕೊಡವಿದೆಯಾ? ಆದರೆ ಲೇಖಕರು ನೀಲಾಂಬಿಕೆಯನ್ನು ಬೈಯುವಾಗ 'ಚಾಂಡಾಲಗಿತ್ತಿ' ಎಂಬ ಪದವನ್ನು ಬಳಸಬಾರದಿತ್ತು. ಏಕೆಂದರೆ ಬಸವಣ್ಣನನ್ನು ಮಾನವೀಯ ಮೌಲ್ಯಗಳ ಸಾಕಾರ ಮೂರ್ತಿಯಾಗಿ ಮಾಡಿದಾಗ ಅಂತಹ ಪದ ಸರಿಯಲ್ಲ ಎನಿಸುತ್ತದೆ. ಈ ದೃಶ್ಯದಲ್ಲಿ ಬಸವಣ್ಣನ ತತ್ವ

ಸಿದ್ಧಾಂತಗಳು ಬಸವಣ್ಣನ ಬಾಯಿಂದಲೇ ಹೇಳಿಸುತ್ತಾರೆ. ಲಿಂಗದೀಕ್ಷೆಯ ಪರಿಕಲ್ಪನೆಯನ್ನು ಎತ್ತಿಹಿಡಿಯುತ್ತಾರೆ.

ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ
ಅನ್ಯರಿಗೆ ಅಸಹ್ಯ ಪಡಬೇಡ, ತನ್ನ ಬಣ್ಣಿಸಬೇಡ
ಪರರ ಹಳಿಯಲು ಬೇಡ, ಇದೇ ಅಂತರಂಗ ಶುದ್ಧಿ
ಇದೇ ಬಹಿರಂಗ ಶುದ್ಧಿ, ಇದೇ ನಮ್ಮ ಕೂಡಲಸಂಗಯ್ಯನೊಲಿಸುವ ಪರಿ

ಈ ದೃಶ್ಯದಲ್ಲಿ ಬಸವಣ್ಣನವರು ಕಳ್ಳರನ್ನು ಬದಲಾವಣೆಯ ದಾರಿಯನ್ನು ಹಿಡಿಯುವಂತೆ ಮಾಡಿದ್ದಾರೆ. ಲೇಖಕರು ಬಸವಣ್ಣನ ಮಾತಿನಿಂದ ಹೇಳಿಸುವ ವಚನಗಳು, ಮಾತುಗಳು ವಾಸ್ತವಕ್ಕೆ ಹತ್ತಿರವಾಗಿವೆ. ಜಗತ್ತು ಎಂದು ಮುಳುಗುತ್ತದೆಯೋ ಅಲ್ಲಿಯವರೆಗೆ ಬಸವಣ್ಣನ ತತ್ವಗಳು ಶಾಶ್ವತವಾಗಿರುತ್ತವೆ. ಮೂಢನಂಬಿಕೆಯಾದ ಕಲ್ಲನಾಗರಕ್ಕೆ ಹಾಲನ್ನು ಎರೆಯುವುದನ್ನು ವಿರೋಧಿಸಿದರು.

ನೋಟ-೧೧ ರಲ್ಲಿ ಬಿಜ್ಜಳನು ಬಸವಣ್ಣನ ತತ್ವವನ್ನು ವಿರೋಧಿಸುತ್ತಾನೆ. ಅಂತರ್ ಜಾತೀಯತೆಯನ್ನು ಅಲ್ಲಗಳೆಯುತ್ತಾನೆ.

"ಬಿಜ್ಜಳ : ಬಸವರಸರೇ ನೀವು ಏನೇ ಹೇಳಿದರೂ ಕುಲಗೆಡಿಸುವ ನಿಮ್ಮ ವ್ಯವಹಾರವು ಕ್ಷಮ್ಯವಲ್ಲ!

ಬಸವ : ಪ್ರಭುವೇ-

ನೆಲೆಯೊಂದೇ ಹೊಲಗೇರಿ ಶಿವಾಲಯಕ್ಕೆ
ಜಲವೊಂದೇ ಶೌಚಾಚಮನಕ್ಕೆ
ಕುಲ ಒಂದೇ ತನ್ನ ತಾನರಿದವಂಗೆ
ಫಲವೊಂದೇ ಷಡುದರ್ಶನ ಮುಕ್ತಿಗೆ
ನಿಲುವು ಒಂದೇ ಕೂಡಲಸಂಗಮದೇವಾ, ನಿಮ್ಮನರಿದವಂಗೆ!

ಬಿಜ್ಜಳ : ಮಂತ್ರಿಗಳೇ, ನಿಮ್ಮ ಈ ವಿಪ್ಲವ ಕಾರಕತತ್ವವನ್ನು ನಾನು ಒಪ್ಪಲು ಸಿದ್ಧನಿಲ್ಲ. ಸನಾತನ ಧರ್ಮ ವಿರುದ್ಧವಾದ ಇಂಥ ಭಯಾನಕ ಕಾರ್ಯಗಳನ್ನು ಮಾಡಲು ಅನುವು ಕೊಟ್ಟರೆ, ನನ್ನ ಪ್ರಜಾಲೋಕವು ರೊಚ್ಚಿಗೇಳಬಹುದು. ರಾಜ್ಯದಲ್ಲಿ ಅಶಾಂತಿ ಪರ್ವವು ನೆಲೆಗೊಳ್ಳಬಹುದು!"[೧೪]

ರಾಜನು ರಾಜಪ್ರಭುತ್ವದ ಹಿನ್ನೆಲೆಯಲ್ಲಿ ಯೋಚಿಸಿದರೆ, ರಾಜಧರ್ಮದ ಹಿನ್ನೆಲೆಯಲ್ಲಿ ಚಿಂತಿಸುತ್ತಾ ಬಸವಣ್ಣನ ತತ್ವವನ್ನು ಒಪ್ಪುವುದಿಲ್ಲ. ರಾಜನೀತಿಯೇ ನನಗೆ ಮುಖ್ಯವೆನ್ನುತ್ತಾ ಬಸವಣ್ಣನು ಈ ನಾಟಕದಲ್ಲಿ ತನ್ನ ತತ್ವದಿಂದ ದೂರವಿರುವ ಪ್ರಸಂಗವನ್ನು ಎದುರಿಸುವ ವ್ಯಕ್ತಿಯಾಗಿ ನಿಲ್ಲಬೇಕಾಗುತ್ತದೆ.

'ಜಗಜ್ಯೋತಿ ಬಸವೇಶ್ವರ' ರಂಗ ನಾಟಕವನ್ನು ಶ್ರೀ ಏಣಗಿ ಬಾಳಪ್ಪನವರು ಸಂಯೋಜಿಸಿದ್ದಾರೆ. ಈ ನಾಟಕದಲ್ಲಿ ಬಸವೇಶ್ವರರು(ಬಸವಣ್ಣ) ದೇವಮಾನವರಾಗಿರುವುದನ್ನು ಕಾಣುತ್ತೇವೆ. ಈ ನಾಟಕವೂ ಸಹ ಬಸವಣ್ಣನನ್ನು ದೈವೀಕರಿಸುವ ನೆಲೆಯಲ್ಲಿ ರಚಿತವಾಗಿದೆ. ನಂದಿಯ ರೂಪದಲ್ಲಿ ಬಸವಣ್ಣನು ಜನ್ಮ ತಾಳಿದನು ಎಂಬಂತೆ ಗೋಚರವಾಗುವ ಹಾಗೆ ಈ ನಾಟಕವು ಪ್ರಾರಂಭವಾಗುತ್ತದೆ. ಈ ನಾಟಕವು ಬಸವಣ್ಣನನ್ನು ಪೌರಾಣಿಕ ಹಿನ್ನೆಲೆಯಲ್ಲಿಯೇ ತೆಗೆದುಕೊಂಡಿದೆ. ಶಿವ-ಪಾರ್ವತಿಯರೇ ಈ ಲೋಕ

ಕಲ್ಯಾಣಕ್ಕಾಗಿ ನಂದಿಯ ರೂಪದಲ್ಲಿ ಬಸವಣ್ಣನನ್ನು ಮಾದರಸ-ಮಾದಲಾಂಬಿಕೆಯ ಉದರದಲ್ಲಿ ಹುಟ್ಟುವಂತೆ ಮಾಡಿದರು.

"ಪಾರ್ವತಿ : ಏನು, ಏನಾಯಿತು ಸ್ವಾಮಿ?

ಶಿವ : ದೇವಿ ಕೇಳಿಸಲಿಲ್ಲವೇ ಈ ಆರ್ತನಾದ?

ಪಾರ್ವತಿ : ಯಾರ ಕೂಗಿದು ಸ್ವಾಮಿ?

ಶಿವ : ಭೂಮಾತೆಯ ಕೂಗು, ಭೂಲೋಕದವರ ರೋದನ, ಮಚ್ಚರ ಲೋಕ ಅಧಃಪತನಕ್ಕೆ ಇಳಿಯುತ್ತಿದೆ. ಬಲಿಷ್ಟರು ದುರ್ಬಲರನ್ನು ಕಾಡುತ್ತಿದ್ದಾರೆ, ಅಧಿಕಾರ ದೈನ್ಯರನ್ನು ತುಳಿಯುತ್ತಿದೆ.

ಪಾರ್ವತಿ : ಇದಕ್ಕೆ ಪರಿಹಾರವೇನು? ಸ್ವಾಮಿ ತಾನೇ ಈ ಸೇವೆಯನ್ನು ವಹಿಸಬೇಕೆ?

ಶಿವ : ಲೋಕ ಸೇವೆಯಲ್ಲಿ ನಾವೆಲ್ಲರೂ ಕಿಂಕರರೇ ಸರಿ. ಆದರೆ ಈಗೊದಗಿದ ಆಪತ್ತನ್ನು ನಂದಿಯೊಬ್ಬನೇ ನೀಗಿಸಬಲ್ಲ, ವತ್ಸಾ ನೀನೀಗ ಭೂಲೋಕದಲ್ಲಿ ಜನ್ಮ ತಾಳಬೇಕಾಗಿದೆ.

ನಂದಿ : ಶಿವಾ ಶಿವಾ, ತಮ್ಮ ಅಗಲುವಿಕೆಯನ್ನು ನಾನೆಂತು ಸಹಿಸಲಿದೇವಾ?

ಶಿವ : ಅನ್ಯರಿಂದ ನೀಗಲಾರದ ಕಾರ್ಯ ಬಾಹುಳ್ಯವಿದು. ವಚನಾಮೃತ ಸಾರವೆಂಬ ಸುಜ್ಞಾನದ ಬೆಳಕನ್ನು ನೀಡುತ್ತಾ ವಿಶ್ವಪ್ರೇಮ, ವಿಶ್ವಶಾಂತಿ ಸ್ಥಾಪನೆಗಾಗಿ 'ಬಸವ'ನೆಂಬ ನಾಮದಿಂದ ನೀನು ಭೂಲೋಕದಲ್ಲಿ ಜನ್ಮತಾಳಲೇಬೇಕು, ವೇಳೆಗೆಳೆಯಬೇಡ, ನೀನಿನ್ನು ಹೊರಡು".[೧೫]

ಹೀಗೆ ನಂದಿಯ ಅವತಾರದಲ್ಲಿ ಬಸವಣ್ಣನು ಜಗತ್ತನ್ನು ಬೆಳಗಿದನು ಎಂದು ನಾಟಕಕಾರರು ಹೇಳಲು ಹೊರಟಂತೆ ಕಾಣುತ್ತದೆ. ಈ ನಾಟಕದಲ್ಲಿ ಪ್ರಶ್ನೆ ಮಾಡುವ ವ್ಯಕ್ತಿಯಾಗಿ ಕಾಣುತ್ತಾನೆ. ಮಧುವರಸರು ನಿತ್ಯವೂ ಮಹಾಮಾತೆಯ ಸೇವೆ, ಆರಾಧನೆ, ಪ್ರಾರ್ಥನೆಯನ್ನು ನಡೆಸಬೇಕು. ರಾಜ್ಯದ ಪ್ರತಿಯೊಬ್ಬ ಪ್ರಜೆಯೂ ಇದರಲ್ಲಿ ಭಾಗಿಯಾಗಬೇಕು ಎಂದು ಡಂಗುರ ಸಾರಬೇಕು ಎಂದಾಗ ಬಸವಣ್ಣ ಮಂಚಣ್ಣನವರೇ. ಪ್ರಜೆಗಳ ಕಷ್ಟ ನಿವಾರಣೆಗೆ ನಾನು ವಿರೋಧಿಸುವೆನೇ? ಎಂದೂ ಇಲ್ಲ. ಆದರೆ ಇಷ್ಟೇ ಭೂರಿಭೋಜನ ಯಜ್ಞಯಾಗಾದಿಗಳಿಗೆ ಹಣ ಖರ್ಚು ಮಾಡುವುದಕ್ಕಿಂತ, ಸದ್ವಿನಿ ಯೋಗದಿಂದ ಪ್ರಜಾಬಾಧೆ ನಿವಾರಿಸುವುದು ಉತ್ತಮ ಉಪಾಯವೆಂದು ನಿಮಗೆ ಸೂಚಿಸದೇ ಇರಲಾರೆ. ಅದಕ್ಕೆ ಬಿಜ್ಜಳ ಮತ್ತಾವ ಉಪಾಯದಿಂದ ನೀಗಿಸಬೇಕೆನ್ನುವಿರಿ? ಎಂದಾಗ ಬಸವಣ್ಣ ಮಹಾಪ್ರಭು, ಸರ್ವ ಪ್ರಜೆಗಳಿಗೂ ದವಸ ಧಾನ್ಯ ಸಿಗುವಂತೆ ಬೊಕ್ಕಸದಿಂದಲೇ ಹಣದ ವ್ಯವಸ್ಥೆಯಾಗಬೇಕೆಂದು ನನ್ನ ವಿನಂತಿ ಎನ್ನುತ್ತಾನೆ. ಬಸವಣ್ಣ ಪ್ರಜೆಗಳ ಹಿತಕ್ಕಾಗಿ ಹೋರಾಡುವ ವ್ಯಕ್ತಿಯಾಗಿ ಕಂಡುಬರುತ್ತಾನೆ. ಈ ನಾಟಕದಲ್ಲಿ ಬಸವಣ್ಣನ ಬುದ್ಧಿಮತ್ತೆಯನ್ನು ಪರೀಕ್ಷಿಸಲಾಗಿದೆ. ಯಾರಿಗೂ ಓದಲು ಬಾರದ ಲಿಪಿಯನ್ನು ಬಸವಣ್ಣನು ಓದುತ್ತಾನೆ. ಅದರ ಮೂಲಕ ರಾಜ್ಯದ ಬೊಕ್ಕಸ ತುಂಬುವಂತೆ ಮಾಡುತ್ತಾನೆ. ಮುತ್ತು, ರತ್ನ, ವೈಡೂರ್ಯ ಸಿಕ್ಕಾಗ ಬಿಜ್ಜಳ ಮಹಾರಾಜರು ಈ ಸಂಪತ್ ಭಂಡಾರವು ನಿಮಗೆ ಸಲ್ಲಬೇಕಾದದ್ದು ಎಂದಾಗ ಬಸವಣ್ಣ ಇದು ದೊರೆಯ ಹಣ! ದೊರೆಯ ಹಣ ದೊರೆಗೆ ಮೀಸಲು! ದೊರೆಯು ಪ್ರಜೆಗಳಿಗೆ ಮೀಸಲು! ನಿಮಗೆ ಸಲ್ಲಬೇಕಾದ್ದನ್ನು ನಾನು ಒಯ್ದರೆ ಹರ ಮೆಚ್ಚುವನೇ? ಅದಕ್ಕೆ ಬಿಜ್ಜಳನು ಬಸವಣ್ಣನವರೇ ನೀವು ಶಾಸನವನ್ನು ಓದಿ ತಿಳಿಸದಿದ್ದರೆ, ಈ ಸಂಪತ್ತು ನಮ್ಮ ವಶವಾಗುತ್ತಿತ್ತೆ? ಎಂದಾಗ ಬಸವಣ್ಣ ಆಸ್ಥಾನದ

ಸೇವಕ ತನ್ನ ಕರ್ತವ್ಯ ನಿರ್ವಹಿಸಿದ್ದೇನೆ. ಕಾಯಕ ಧರ್ಮದ ತತ್ವವನ್ನು ತಿಳಿಸುತ್ತಾನೆ. ಬಸವಣ್ಣನ ಮೂಲಕ ವೃತ್ತಿ ಪರಿಕಲ್ಪನೆಯನ್ನು ಈ ನಾಟಕವು ಸಹೃದಯರಿಗೆ ತಿಳಿಸುತ್ತದೆ. ಅಲ್ಲದೇ ಬಸವಣ್ಣ ಒಂದು ಸಲಹೆಯನ್ನು ನೀಡುತ್ತಾನೆ. ರಾಜ್ಯದಲ್ಲಿ ಉಂಟಾದ ಕ್ಷಾಮಬೇಗೆಯ ನಿವಾರಣೆಗಾಗಿ ಈ ಸಂಪತ್ ಭಂಡಾರವನ್ನು ವಿನಿಯೋಗಿಸಬೇಕೆಂದು ಸಲಹೆ ನೀಡುವುದು ಸಹ ಅವರ ಜನರ ಮೇಲೆ ಇದ್ದ ಕಾಳಜಿ ಗೊತ್ತಾಗುತ್ತದೆ.

ಲೇಖಕರು ಬಸವಣ್ಣನವರ ವಚನವನ್ನು ಹುಡುಗನ ಮೂಲಕ ಹೇಳಿಸುತ್ತಾರೆ.

ನರವಿಂದ್ಯದೊಳಗೆನ್ನ ಹುಲುಗಿಳಿಯ ಮಾಡಿ
ಸಲಹುತ್ತ ಶಿವಾ ಶಿವಾ ಎಂದೋದಾಸಯ್ಯ
ಭಕ್ತಿಯೆಂಬ ಪಂಜರದೊಳಗಿಕ್ಕಿ ಸಲಹಯ್ಯ
ಕೂಡಲಸಂಗಮದೇವಾ ॥

ಹುಡುಗನು ಬಸವಣ್ಣನಿಗೆಕಾಲಿಗೆ ಬಿದ್ದಾಗ ಚಿಕ್ಕಮಗಳು ಪಾದಮುಟ್ಟಿನಮಸ್ಕರಿಸಬಾರದಪ್ಪ ಎಂದು ಹೇಳುವಲ್ಲಿ ಬಸವಣ್ಣನ ಗೌರವ ಭಾವನೆಯನ್ನು ಸಹ ಎತ್ತಿಹಿಡಿಯುವ ಕೆಲಸ ಮಾಡಿದ್ದಾರೆ. ಅಂತೆಯೇ ಗಂಗಾಂಬಿಕೆಯ ಮಾಂಗಲ್ಯದ ಸರವನ್ನು ಕಿತ್ತುಕೊಂಡು ಹೋಗುವ ಸನ್ನಿವೇಶದಲ್ಲಿ ಗಂಗಾಂಬಿಕೆ ಚೋರ ನನ್ನ ಮಾಂಗಲ್ಯವನ್ನು ಕದ್ದು ಹೊಯ್ಯುತ್ತಿದ್ದಾನೆ ಎಂದಾಗ ಹುಚ್ಚೀ.... ಸಜೀವವಾಗಿರುವ ನಾನೇ ನಿನ್ನ ಮಾಂಗಲ್ಯವಾಗಿರುವಾಗ ಆ ಜನ್ಮದ ತಾಳಿಗೇಕೆ ಮೋಹವೇಕೆ? ಎಂದಾಗ ಗಂಗಾಂಬಿಕೆ ಮೋಹವಲ್ಲ, ಲೋಕಚಾರ, ಮಾಂಗಲ್ಯವೇ ಸತಿಗೆ ಭೂಷಣವಲ್ಲವೇ? ಆಗ ಬಸವಣ್ಣ ಅಲ್ಲ. ಸತಿಗೆ ಪತಿಯೇ ಭೂಷಣ! ಪತಿಯೇ ಪರದೈವ. ಹೀಗೆ ತಿಳಿದ ಮಹಾಸತಿ ಯಾವ ಮೌಢ್ಯಕ್ಕೂ ಮೋಹಪಡಲಾರಳು ಎಂದು ಹೇಳುತ್ತಾ ಕಳ್ಳನಿಗೆ ಮಾಂಗಲ್ಯದ ಸರವನ್ನು ಕೊಡುತ್ತಾನೆ. ಇಲ್ಲಿ "ದಯೆಯೇ ಧರ್ಮದ ಮೂಲ" ಎಂಬ ತತ್ವವನ್ನು ತರಲು ನಾಟಕವನ್ನು ಈ ದೃಶ್ಯವನ್ನು ತಂದಿದ್ದಾರೆ. ಆಗ ಹೇಳುವ ವಚನವಾಗಿದೆ.

ಒಡನಿರ್ದು ಸತಿಯೆಂದು ನಂಬಿದ್ದೆನಯ್ಯ
ಕೈಹಿಡಿದ ಸಜ್ಜನೆಯೆಂದು ನಂಬಿದ್ದೆನಯ್ಯ
ಅಯ್ಯೋ ಎನ್ನಯ್ಯನ ಕೈ ನೊಂದಿತು
ತೆಗೆದುಕೊಡೆ ಎಲೆ ಚಂಡಾಲಗಿತ್ತಿ
ಕಳ್ಳನ ಮನೆಗೊಬ್ಬ ಬಲುಗಳ್ಳ ಬಂದರೆ
ಕೂಡಲ ಸಂಗಮದೇವನಲ್ಲದೇ ಮತ್ತಾರೂ ಅಲ್ಲ ॥ ೧ ॥

ಹೊನ್ನಿನೊಳಗೊಂದೊರೆಯ, ಸೀರೆಯೊಳಗೊಂದೆಳೆಯ
ಅನ್ನದೊಳಗೊಂದಗುಳ ಇಂದಿಗೆ ನಾಳಿಂಗೆ ಬೇಕೆಂದೆನಾದೇಕೆ
ನಿಮ್ಮಾಣೆ ನಿಮ್ಮ ಪುರಾತನರಾಣೆ..
ನಿಮ್ಮ ಶರಣರಿಗಲ್ಲದೇ ಮತ್ತೊಂದನರಿಯೇ ಕೂಡಲಸಂಗಮದೇವಾ ॥ ೨ ॥

ಈ ದೃಶ್ಯ ೮ರಲ್ಲಿ ಕಳ್ಳನಿಗೆ ಕಾಯಕದ ಮಹತ್ವವನ್ನು ತಿಳಿಸುತ್ತಾನೆ.. ಆತನನ್ನು ಕಳ್ಳತನದಿಂದ ಮುಕ್ತಗೊಳಿಸುತ್ತಾನೆ. ಆತನನ್ನು ಒಬ್ಬ ಮನುಷ್ಯನ ರೂಪಕ್ಕೆ ತರುತ್ತಾನೆ. ನಾಟಕಕಾರರು ಬಸವಣ್ಣನ

ಮೂಲಕವೇ ಬಸವಣ್ಣನ ಕಾಯಕ ತತ್ವವನ್ನು ತಂದಿದ್ದಾರೆ. ಅಲ್ಲದೇ ಕಳ್ಳನು ಕಲ್ಲನ್ನೇ ಲಿಂಗವೆಂದು ಹೇಳಿದಾಗ ಬಹಳ ಸಂತೋಷ ಪಟ್ಟು ಲಿಂಗಧೀಕ್ಷೆಯನ್ನು ನೀಡುತ್ತಾನೆ.

ಮಂಚಣ್ಣನವರು ಬಸವಣ್ಣನವರು ಹೊಲೆಮಾದಿಗರನ್ನು ಶಿವಮಂದಿರ ಪ್ರವೇಶ ಮಾಡಿಸಿದ್ದಾರೆ ಎಂದು ಬಿಜ್ಜಳನಲ್ಲಿ ಹೇಳಿದಾಗ ಬಸವಣ್ಣನವರು ನಾನು ಸುಳ್ಳು ಆಡುವೆನೇ? ದಿಟವನ್ನು ನುಡಿವುದು, ನುಡಿದಂತೆ ನಡೆವುದು, ನುಡಿದು ತಪ್ಪುವ ಪ್ರಪಂಜಿಯು ನಾನಲ್ಲ. ಯಾರು ಹೊಲೆ ಮಾದಿಗರು ಎಂದಾಗ ಮಂಚಣ್ಣ, ಹರಳಯ್ಯ, ಡೋಹರ ಕಕ್ಕಯ್ಯ ಇವೆಲ್ಲರೂ ಹೊಲೆಯರಲ್ಲವೇ? ಎಂದಾಗ ಬಸವಣ್ಣನು ಇಲ್ಲ ಪಂಡಿತರೇ ಅವರು ಊರಲ್ಲಿ ಸ್ಥಳವಿಲ್ಲದಕ್ಕಾಗಿ ಹೊಲಗೇರಿ ಸೇರಿಲ್ಲ. ಊರಲ್ಲಿ ಹೊಲೆಮಾದಿಗರು ಹೆಚ್ಚಾಗ ಹತ್ತಿದ್ದರಿಂದ ಅವರು ಊರು ಬಿಟ್ಟು ಹೊಲಗೇರಿ ಸೇರಿದ್ದಾರೆ. ನಿಜವಾದ ಹೊಲೆ ಮಾದಿಗರು ಯಾರು-ಯಾರು ಬಲ್ಲಿರಾ?

ಕೊಲ್ಲುವವನೇ ಮಾದಿಗ
ಹೊಲಸು ತಿನ್ನುವವನೇ ಹೊಲೆಯ
ಕುಲವೇನು? ಅವಂದಿರ ಕುಲವೇನು?
ಸಕಲ ಜೀವಾತ್ಮರಿಗೆ ಲೇಸನು ಬಯಸುವ ನಮ್ಮ ಕೂಡಲ ಶರಣರೆಲ್ಲ ಕುಲಜರು

ಇಂತಹ ಸದ್ಗುಣ ಸದಾಚಾರ ಸಂಪನ್ನರಿಗೆ ನೀವು ಹೊಲೆ ಮಾದಿಗರೆಂದು ಹೇಳುವುದು ಒಳಿತಲ್ಲ ಎಂದು ತನ್ನ ಅಭಿಪ್ರಾಯವನ್ನು ಖಡಾಖಂಡಿತವಾಗಿ ತಿಳಿಸುವಲ್ಲಿ ಈತನ ಧೈರ್ಯ ಮೆಚ್ಚುವಂತದ್ದು.

"ಅಪ್ಪನು ನಮ್ಮ ಮಾದಾರ ಚೆನ್ನಯ್ಯ
ಬೊಪ್ಪನು ನಮ್ಮ ಡೋಹರ ಕಕ್ಕಯ್ಯ
ಚಿಕ್ಕಯ್ಯ ನಮ್ಮಯ್ಯ ಕಾಣಿರಯ್ಯ
ಅಣ್ಣನು ನಮ್ಮ ಕಿನ್ನರಿ ಬೊಮ್ಮಯ್ಯ
ಎನ್ನನೇತಕರಿಯಿರಿ ಕೂಡಲಸಂಗಮದೇವಾ ॥"[೧೬]

ಈ ದೃಶ್ಯದಲ್ಲಿ ನಾಟಕಕಾರರು ಜಾತಿಯತೆಯನ್ನು ವಿರೋಧಿಸುವ ನೆಲೆಯಲ್ಲಿ ಬಸವಣ್ಣನನ್ನು ನೋಡಿದ್ದಾರೆ. ಈ ದೃಶ್ಯವು ದಲಿತರನ್ನು ಹೊಲೆಯರೆಂದು ನೋಡುವ ದೃಷ್ಟಿಕೋನದಲ್ಲಿ ಈಗಲೂ ಪ್ರಸ್ತುತ ದಿನಮಾನಗಳಿಗೆ ಹೊಂದಿಕೆಯಾದಂತೆ ತೋರುತ್ತದೆ. ತನ್ನ ಕರ್ತವ್ಯನಿಷ್ಠೆಯನ್ನು ಹೇಳುವಲ್ಲಿ ಬಸವಣ್ಣನ ವಚನದಿಂದಲೇ ಹೇಳಿಸಿದ್ದಾರೆ.

ಅರ್ಥವನನರ್ಥವ ಮಾಡಿ ಕೋಲಾಹಲಂಗೈಯುತಿರಲಿ
ಹುಟ್ಟಿದ ಮಕ್ಕಳ ನವಖಂಡನ ಮಾಡಿ ಕಡಿವುತಿರಲಿ
ಮುಟ್ಟಿದ ಸ್ತ್ರೀ ಅಭಿಮಾನಗೊಂಡು ನೆರವುತಿರಲಿ
ಮತ್ತೆ ಮತ್ತೆ ದಾಸೋಹ ಜಂಗಮಾರಾಧನೆಗೆ ತಪ್ಪಿದೆನಾದೊಡೆ
ಮೂಗು ಕೊಯ್ಯುವ ನಮ್ಮ ಕೂಡಲಸಂಗಮದೇವಾ ॥

ದೃಶ್ಯ ೪ರಲ್ಲಿ ಬಸವಣ್ಣನ ಮನೆಗೆ ಭಿಕ್ಷುಕನು ಭಿಕ್ಷೆ ಬೇಡಲು ಬಂದಾಗ ವೀರಭದ್ರನು ಆತನನ್ನು ಬರಿಗೈಲಿ ಕಳುಹಿಸಿದಾಗ ಬಸವಣ್ಣನು ಸ್ವಾಮಿ ಯಾವ ವೇಷದಲ್ಲಿ ಯಾವಾಗ ಬರುತ್ತಾನೆಂಬುದನ್ನು ಪಾಮರರಾದ ನಾವು ಅರಿಯಲಾರೆವು. ಮನೆಗೆ ಬಂದ ಅತಿಥಿಗಳನ್ನು ಪ್ರೇಮದಿಂದ ಆದರದಿಂದ ಸತ್ಕರಿಸಿ ಬೀಳ್ಕೊಡಬೇಕು. ಬಸವಣ್ಣ ಭಿಕ್ಷುಕನಿಗೆ ಶಿವಪ್ರಸಾದ ನೀಡಿ ಕಳುಹಿಸುತ್ತಾನೆ. ದಯದ ಕಲ್ಪನೆಯನ್ನು, ತತ್ವವನ್ನು ತಂದಿದ್ದಾರೆ. "ದಯವೇ ಧರ್ಮದ ಮೂಲವಯ್ಯ" ಎಂಬ ತತ್ವವನ್ನು ನಾಟಕಕಾರರು ಈ ದೃಶ್ಯದಲ್ಲಿ ತರಲು ಪ್ರಯತ್ನಿಸಿದ್ದಾರೆ.

ಬಸವಣ್ಣನಿಗೆ ತನ್ನ ತತ್ವಗಳಿಗೆ ಬೆಲೆಸಿಗದೇ ಇದ್ದಾಗ ಮಂತ್ರಿ ಪದವಿಯನ್ನು ತ್ಯಾಗ ಮಾಡುತ್ತಾನೆ. ಬಿಜ್ಜಳನು ಬಸವಣ್ಣ ಏನಿದು? ಏನಿದು? ಒಮ್ಮೆಲೇ ದುಡುಕಿ ಹೀಗೆ ಮಾಡುವುದೇ? ಈ ಅಲ್ಪ ಕಾರಣಕ್ಕಾಗಿ ಮಂತ್ರಿ ಪದವಿಯನ್ನು ತ್ಯಾಗ ಮಾಡುವುದೇ? ಎಂದಾಗ ಬಸವಣ್ಣ ಸಂಶಯ ಬಂದಿದೆ ನಿಮಗೆ ಅಂದಾಗ ನಾನು ಇಲ್ಲಿ ಇರುವುದು ಕ್ಷೇಮವಲ್ಲ ಎಂದು ಹೇಳುತ್ತಾರೆ.

ನಾಟಕಕಾರರು ಕೊನೆಯಲ್ಲಿ ಬಸವಣ್ಣ ಕಲ್ಯಾಣವನ್ನು ನಿರ್ಗಮಿಸುವ ಸಂದರ್ಭದಲ್ಲಿ ಕಲ್ಯಾಣದ ಪ್ರಜೆಗಳು ಗುಂಪು ಗುಂಪಾಗಿ ಬಸವಣ್ಣ ಎಂದು ಕೂಗುತ್ತಾ ಅಳುತ್ತಾ ನಡೆದುಕೊಂಡು ಬರುತ್ತಾರೆ. ಆಗ ಬಸವಣ್ಣ ಪ್ರಜೆಗಳನ್ನು ಸಂತೈಸುತ್ತಾ ಹೊರಡುತ್ತಾರೆ. ಆ ನಂತರ ಜಗದೇವ ಮತ್ತು ಮಲ್ಲಿ ಬೊಮ್ಮರು ಬಿಜ್ಜಳನನ್ನು ಕೊಲೆಗೈಯುತ್ತಾರೆ. ಈ ನಾಟಕವು ಬಸವಣ್ಣನಿಂದ ಹುಟ್ಟಿನಿಂದ ಪ್ರಾರಂಭವಾಗಿ ಬಿಜ್ಜಳನ ಕೊಲೆಯವರೆಗೆ ಸಾಗುತ್ತದೆ. ಈ ನಾಟಕದಲ್ಲಿ ಸಹ ರಾಜ ಪ್ರಭುತ್ವವೇ ಗೆಲ್ಲುತ್ತದೆ. ಆದರೆ ಅಲ್ಲಲ್ಲಿ ನಾಟಕಕಾರರು ಬಸವಣ್ಣನ ತತ್ವಗಳನ್ನು ತಂದಿದ್ದಾರೆ. ದಯದ ಕಲ್ಪನೆ, ಜಾತೀಯತೆಯ ವಿರೋಧ, ಶರಣತತ್ವ, ಲಿಂಗ ಪರಿಕಲ್ಪನೆ, ಕಾಯಕದ ಪರಿಕಲ್ಪನೆ, ವೃತ್ತಿಧರ್ಮದ ಪರಿಕಲ್ಪನೆಯನ್ನು ಬಸವಣ್ಣನವರ ವಚನಗಳ ಮೂಲಕ ತಂದಿದ್ದಾರೆ. ಈ ನಾಟಕದಲ್ಲಿ ಬಸವಣ್ಣ ಸರ್ವ ಜನಾಂಗಕ್ಕೆ ಹಿತವನ್ನು ಉಂಟುಮಾಡುವ ವ್ಯಕ್ತಿಯನ್ನಾಗಿ ನಾಟಕಕಾರರು ಗುರುತಿಸುತ್ತಾರೆ. ಈ ನಾಟಕದಲ್ಲಿ ಬಸವ ತತ್ವಗಳು ಎಷ್ಟು ಜನರಲ್ಲಿ ಬೇರೂರಿದ್ದವು ಎಂಬಲ್ಲಿ ಬಸವಣ್ಣ ಅಧಿಕಾರಿಯಾಗಿ ಮಂತ್ರಿಯಾಗಲಿಲ್ಲ. ಬದಲಾಗಿ ಪ್ರಜೆಗಳ ಹಿತಕ್ಕಾಗಿ ಮಂತ್ರಿಯಾಗಿದ್ದ ಎಂಬುದನ್ನು ಗುರುತಿಸುತ್ತದೆ. ಬಸವಣ್ಣನ ಬಾಯಿಯಿಂದ ಹೇಳಿಸುವ ಮಾತು ಬಹಳ ಅರ್ಥಪೂರ್ಣವಾಗಿದೆ.

ಅರಸು ವಿಚಾರ, ಸಿರಿಯು ಶೃಂಗಾರ ಸ್ಥಿರವಲ್ಲ ಮಾನವಾ
ಕೆಟ್ಟಿತ್ತು ಕಲ್ಯಾಣ, ಹಾಳಾಯ್ತು ನೋಡಾ!
ಒಬ್ಬ ಜಂಗಮದಭಿಮಾನದಿಂದ
ಚಾಳುಕ್ಯರಾಯನ ಆಳಿಕೆ ತೆಗೆಯಿತ್ತು!
ಸಂದಿತ್ತು ಕೂಡಲಸಂಗಮದೇವಾ ನಿಮ್ಮ ಕವಳಿಗೆಗೆ!

ಹೀಗೆ ಹೇಳಿ ಕೊನೆಯಲ್ಲಿ ಬಸವಣ್ಣ ಕೈಹಿಡಿದು ನನ್ನನ್ನು ಎತ್ತಿಕೋ ತಂದೆ ಶಂಭೋ ಹರಹರ ಮಹಾದೇವ ಎಂದು ಲಿಂಗೈಕ್ಯರಾಗುವರು.

ಜಿ.ಎಚ್.ಹನ್ನೆರಡುಮಠರವರು ಬರೆದ "ಮಹಾಸಂಗಮ" ನಾಟಕದಲ್ಲಿ ಬಸವಣ್ಣನವರನ್ನು ವಿಶಿಷ್ಟ ನೆಲೆಯಲ್ಲಿ ನೋಡಿದ್ದಾರೆ. ನಾರದ ಬಸವನ ಸಂವಾದವನ್ನೇ ಮಾಡಿಸುವ ಕೆಲಸವನ್ನು ನಾಟಕಕಾರರು ಮಾಡಿಸಿದ್ದಾರೆ. ನಾರದಮುನಿಯೇ ಬಸವಧರ್ಮವನ್ನೇ ಒಪ್ಪುವಂತೆ ಮಾತನಾಡುತ್ತಿರುವ ಶೈಲಿಯಲ್ಲಿದೆ.

ಬಸವ : ಹಾಂ.... ತಡೆತಡೆ.... ಇದೆಲ್ಲಿಂದ ಬಂತು ಈ ಬಸವಧರ್ಮ?

ನಾರದ : ಇನ್ನೆಲ್ಲಿಂದ.... ನಿನ್ನಿಂದ..... ನಿನ್ನ ಧರ್ಮದ ಹೆಸರು ಗೊತ್ತಿಲ್ಲವೇನಪ್ಪಾ ನೀನು?

ಬಸವ : ಇದೇನು ಚೋದ್ಯ..... ಸವತಿ ಸಕ್ಕರೆ ಬೇವು ಬೆಲ್ಲ ಉಂಟೆ..... ಇರಿಯದ ವೀರ ಇಲ್ಲದ ಸೊಬಗ ನಾನು..... ಹೆಣಮೂಲ ನಾನು..... ಉಸರವಳ್ಳಿಯಂತೆ ಎನ್ನಿರವು..... ನಾನೊಬ್ಬ ಮರುಳ ಶರಣ..! ಶಿವಾ ಶಿವಾ.... ಸಂಗಮನಾಥಾ..... ಸಂಗಮನಾಥ..... ಬೆಳೆಯದ ಮುನ್ನವೇ ಕೊಯ್ವರೆ..... ನಾನೇ ಕೇಳದ ಕಟ್ಟದ ಕಲ್ಪಿಸಿದ ಧರ್ಮ..... ಬಸವ ಧರ್ಮ! ಯಾರು ಸ್ಥಾಪಿಸಿದರು ಈ ಧರ್ಮ?

ನಾರದ : ವಿಶ್ವಗುರು ಬಸವಣ್ಣನವರು!



ಬಸವ : ಆಂ... ಆಂಂ....?

ನಾಟಕಕಾರರು ಅವರ ತತ್ವವನ್ನು ತಿಳಿದುಕೊಳ್ಳಬೇಕು ಎಂಬ ಹಿನ್ನೆಲೆಯಲ್ಲಿ ಬರೆದಂತೆ ಕಾಣುತ್ತದೆ. ಅವರ ತರುವ ಪಾತ್ರಗಳು ಕಾಲ್ಪನಿಕವಾದರೂ ವಾಸ್ತವಿಕತೆಗೆ ಹತ್ತಿರ ಎನ್ನುವಂತೆ ಗೋಚರವಾಗುವುದರಲ್ಲಿ ಅನುಮಾನವಿಲ್ಲ. ಇದು ಕಾಲ್ಪನಿಕ ನಾಟಕವಾದರೂ ಬರುವ ವ್ಯಕ್ತಿಗಳೇ ಕಾಲ್ಪನಿಕವಾದರೂ ಬರುವ ವ್ಯಕ್ತಿಗಳು ಎಂತಹವರು ಎಂದರೆ ಬಸವ, ನಾರದ, ಅಂಬೇಡ್ಕರ್ ಇವರ ಬಾಯಿಂದ ಹೇಳಿಸುವ ಮಾತುಗಳ ಸಾಮಾನ್ಯವಾದವುಗಳಲ್ಲ. ಅಂಬೇಡ್ಕರ್‌ರು ಬಸವನಿಗೆ ಹೇಳುವ ಮಾತಿನಲ್ಲಿ ಬಹಳ ತಾತ್ವಿಕತೆ ಅಡಗಿದೆ. ವಾಸ್ತವಿಕತೆಗೂ ಹತ್ತಿರವಿದೆ. ಇಂದು ಆಚರಣೆಗಳು ವ್ಯಕ್ತಿಯಾಗಿ ನಿಂತಿವೆಯೆ ಹೊರತು ಆತನ ತತ್ವಗಳಿಗೆ ಅಲ್ಲ ಎಂಬುದನ್ನು ಅಂಬೇಡ್ಕರ್‌ರ ಪಾತ್ರ ಮಾತನಾಡುತ್ತದೆ.

"ಅಂಬೇಡ್ಕರ್ : ಬಸವಾ....... ನಾನು ಬಯಸಿದ್ದು ತತ್ವಪೂಜೆ..... ಈಗ ನಡೆದದ್ದು ವ್ಯಕ್ತಿಪೂಜೆ...! ನನ್ನ ತತ್ವ ಎಲ್ಲಾ ಉಲ್ಟಾ ಪಲ್ಟಾ ಆದರೆ ಆ ಜನ ಸಹಿಸುತ್ತಾರೆ...... ಆದರೆ ನನ್ನ ಈ ಕಲ್ಲು ಮೂರ್ತಿಯ ಚಾಳೀಸು ಹೋದರೆ ಬೆಂಕಿಯ ಭೂತವಾಗುತ್ತದೆ! ಏಕೆ ಗೊತ್ತೇ? ಇವರಿಗೆ ನಾನು ಹೇಳಿದ್ದು ಮುಖ್ಯವಲ್ಲ.... ನಾನು ಮುಖ್ಯ! ಇವರಿಗೆ ಜ್ಯೋತಿ ಮುಖ್ಯವಲ್ಲ.... ಜಾತಿ ಮುಖ್ಯ!"[೧೭]

ಈ ನಾಟಕವು ಜನರಲ್ಲಿ ಜಾತೀಯತೆಯನ್ನು ಮಾಡಬೇಡಿ, ಅವರ ತತ್ವಗಳನ್ನು ಅಳವಡಿಸಿಕೊಳ್ಳಿ ಎನ್ನುವ ಸಂದೇಶವನ್ನು ಕಿವಿಮಾತಾಗಿ ಹೇಳುವಂತೆ ಅಂಬೇಡ್ಕರ್ ಪಾತ್ರದಿಂದ ಹೇಳಿಸಲಾಗಿದೆ. ಇಂದು ಹಾಗೆಯೇ ರಾಷ್ಟ್ರವ್ಯಾಪಿ ದೇಶಭಕ್ತರನ್ನು ಹಾಗೆಯೇ ನೋಡಲಾಗಿದೆ. ಬಸವಣ್ಣನವರನ್ನು ವೀರಶೈವರು, ವಾಲ್ಮೀಕಿಯನ್ನು ವಾಲ್ಮೀಕಿಯಾದವರು ಅಂಬೇಡ್ಕರನ್ನು ಹರಿಜನರು ಆರಾಧನೆ ಮಾಡುವ ಶೈಲಿ ಬೆಳೆದಿದೆ. ಹಾಗಾಗಿ ಈ ಶೈಲಿ ಹೋಗಿ ಅವರ ತತ್ವಗಳನ್ನು ತೆಗೆದುಕೊಂಡರೆ ಯಾವ ಜಾತೀಯತೆಯು ಕಂಡುಬರುವುದಿಲ್ಲ.

ಬಸವನ ವಚನಗಳನ್ನು ಅವರ ಮಾತಿನಿಂದಲೇ ಹೇಳಿಸುವ ಕೆಲಸವನ್ನು ನಾಟಕಕಾರರು ಮಾಡಿದ್ದಾರೆ.

"ಒಂದಕ್ಕೊಂಬತ್ತ ನುಡಿದು ಕಣ್ಣ ಕೆಂಪನೆ ಮಾಡಿ
ಗಂಡುಗೆದರಿ ಮುಡಿಹಿಕ್ಕಿ ಕೆಲೆವವರ ಕಂಡರೆ
ಅಂಜುವೆ ಓಸರಿಸುವೆ!
ಓಡಿದೆನೆಂಬ ಭಂಗವಾದಡೆ ಆಗಲಿ
ನಮ್ಮ ಕೂಡಲಸಂಗನ ಶರಣರ ಅನುಭಾವವಿಲ್ಲದವರ
ಹೊಲ ಮೇರೆಯ ಹೊಂದೆ
ಹೊಲನ ಬಿಟ್ಟೋಡುವೆ"[೧೮]

ನಾಟಕಕಾರರು ಬಸವಣ್ಣನನ್ನು ಯಾವ ರೀತಿಯಾಗಿ ಬಳಸಿಕೊಂಡಿದ್ದಾರೆ ಎಂಬದನ್ನು ಗುರುತಿಸುತ್ತಾರೆ.

ಬಸವ : ಇದೇನಿದು! ಎಲ್ಲೆಲ್ಲೂ ನನ್ನ ಹೆಸರಿನ ಉಪಯೋಗ.... ಅಗೋ..... ಬಸವೇಶ್ವರ ಖಾನಾವಳಿ.... ಪಾನ್ ಬೀಡಾ ಶಾಪ್, ಬಸವೇಶ್ವರ ಹೇರ್ ಕಟಿಂಗ್ ಶಾಪ್...

ನಾರದ : ಯಾಕಂದ್ರ ಇದು ಡೆಮಾಕ್ರಟಿಕ್ ಫ್ರೀ ಇಂಡಿಯಾ.... ಸಿಕ್ಕ ಬಿದ್ದಾಂಗ ಸಿಲೆಕ್ಟಾಗತಾರು ಇಲೆಕ್ಶನ್‌ದಾಗ...

ಬಸವ : ಆದ್ರ ಇವ್ರು ನನ್ನ ದನಾ... ದನಾ ಮಾಡ್ಯಾರಲ್ಲಾ..... ನಾ ಅಂದ್ರ ದನಾ ಏನು?

ನಾರದ : ನಿನ್ನ ಪವಾಡೊ ಯಪ್ಪಾ ಅದು. ನಿನ್ನ ಪವಾಡ ನೂರ ಮೂವತ್ತು ಆರು.... ಪವಾಪುರುಷ ನೀನು...

ಬಸವ : ನಿನ್ನ ಹೆಸರಿನಿಂದ ಅವರು ದನ ಮೆರೆಸಿದರೆ ಮೆರೆಸಲಿ... ಪಾಪ.... ಆ ಮುಗ್ಧ ಪ್ರಾಣಿಗಳಿಗೆ ಒಂದು ದಿನ ವೇಗ ಭಾರದಿಂದ ವಿಶ್ರಾಂತಿಯಾದರೂ ಸಿಕ್ಕಿತು. ನನ್ನ ಹೆಸರ ಮೇಲೆ ಕ್ಷೌರದ ಅಂಗಡಿ ಬೇಕಾದರೆ ಇಡಲಿ. ಕಾಯಕವೇ ಕೈಲಾಸವಲ್ಲವೇ?

ಈ ನಾಟಕದಲ್ಲಿ ಬಸವಣ್ಣನ ಕಾಯಕದ ಪರಿಕಲ್ಪನೆಯನ್ನು ತತ್ವವನ್ನು ಅವರಿಂದಲೇ ಹೇಳಿಸುವ ಕೆಲಸವನ್ನು ನಾಟಕಕಾರರು ಮಾಡಿದ್ದಾರೆ.

"ಎನಿಸೆನಿಸೆಂದೊಡೆ ನಾ ಧೃತಿಗೆಡೆನಯ್ಯಾ!
ಎಲುದೋರಿದರೆ ನರಹರಿದು ಕರುಳು ಕುಪ್ಪಳಿಸಿದರೆ
ನಾ ಧೃತಿಗೆಡೆನಯ್ಯಾ!!
ನರಹರಿದು ಅಟ್ಟಿ ನೆಲಕ್ಕೆ ಬಿದ್ದರೆ
ನಾಲಗೆ "ಕೂಡಲ ಸಂಗಾ ಶರಣ" ಎನ್ನುತ್ತಿದ್ದಿತ್ತಯ್ಯಾ"[೧೯] ॥ ೧ ॥

ಎನ್ನ ಕಾಯವ ದಂಡಿಗೆಯ ಮಾಡಯ್ಯಾ!
ಎನ್ನ ಸಿರವ ಸೋರೆಯ ಮಾಡಯ್ಯಾ!
ಎನ್ನ ನರವ ತಂತಿಯ ಮಾಡಯ್ಯಾ!
ಎನ್ನ ಬೆರಳ ಕಡ್ಡಿಯ ಮಾಡಯ್ಯಾ!

ಬತ್ತೀಸರಾಗವ ಹಾಡಯ್ಯಾ!
ಉದರಲೊತ್ತಿ ಬಾರಿಸು ಕೂಡಲ ಸಂಗಮದೇವಾ[೨೦] ॥ ೨ ॥

ನಾಟಕಕಾರರು ಬಸವಣ್ಣನ ತತ್ವಗಳನ್ನು ಅವರ ವಚನಗಳಿಂದಲೇ ಹೇಳಿಸಿದ್ದಾನೆ.

ಅರ್ಥವನರ್ಥವ ಮಾಡಿ ಕೋಳಾಹಳಂಗೆಯ್ಯುತ್ತಿರಲಿ
ಹುಟ್ಟಿದ ಮಕ್ಕಳ ನವ ಖಂಡನ ಮಾಇ ಕಡಿಯುತ್ತಿರಲಿ
ಮುಟ್ಟುವ ಸ್ತ್ರೀಯ ಕಣ್ಣು ಮುಂದೆ ಅಭಿಮಾನಗೊಂಡು
ನೆರೆಯುತ್ತಿರಲಿ!
ಹಾಕೊಂದೆಸೆ ಹನ್ನೊಂದೆಸೆಯಾಗಿ ಮೂಡುತ್ತಿರಲಿ
ಮತ್ತೆಯೂ ಲಿಂಗಾರಾಧನೆಯ ಮಾಡುವೆ
ಜಂಗಮಾರಾಧನೆಯ ಮಾಡುವೆ!
ಇಂತಪ್ಪ ಭಾಷೆಯ ಕಿಂಚಿತ್ತು ಹುಸಿಯಾದರೆ
ನೀನಂದೆ ಮೂಗ ಕೊಯಿ ಕೂಡಲಸಂಗಮದೇವಾ ॥

ನಾಟಕಕಾರರು ಬಸವ ಅಕ್ಷರದಿಂದಲೇ ವಚನ ರಚಿಸಿದ್ದಾರೆ.

ಬ ಎಂಬಲ್ಲಿ ಭವ ಹರಿಯಿತ್ತಯ್ಯಾ!
ಸ ಎಂಬಲ್ಲಿ ಸರ್ವಜ್ಞಾನಿಯಾದೆನು!
ವ ಎಂಬಲ್ಲಿ ವಂಚಿಸುವರೆ ಚೈತನ್ಯಾತ್ಮಕನಾದೆನು
ಇಂತೀ ಬಸವಾಕ್ಷರತ್ರಯ

ನಾಟಕಕಾರರು ಬಸವಣ್ಣನನ್ನು ಮತ್ತು ಅವರ ತತ್ವಗಳನ್ನು ವಿಶಿಷ್ಟ ನೆಲೆಯಲ್ಲಿ ನೋಡುವ ಕೆಲಸವನ್ನು ಮಾಡಿದ್ದಾರೆ.

ಶ್ರೀ ಶಿವಲಿಂಗ ಶಾಸ್ತ್ರಿ ಹಿರೇಮಠ ಅವರು ಬರೆದ "ಇವನಾರವ" ನಾಟಕದಲ್ಲಿ ವಿಶ್ವಗುರು ಬಸವೇಶ್ವರರ ಸಮತಾದೃಷ್ಟಿ. ಸಕಲರಿಗೂ ಲೇಸ ಬಯಸಿದ ವಿಶಾಲ ಮನೋಭಾವ ಎಲ್ಲರಲ್ಲಿಯೂ ದೇವರನ್ನು ಕಂಡ ಲಿಂಗದೃಷ್ಟಿ, ಕಟುಕರನ್ನು ಕರುಣಮೂರ್ತಿಗಳನ್ನಾಗಿ ಮಾಡಿದೆ. ಈ ನಾಟಕದಲ್ಲಿ ಮಾನವೀಯ ಮೌಲ್ಯಗಳನ್ನು ಎತ್ತಿ ತೋರಿಸಲಾಗಿದೆ.

ನಾಟಕಕಾರರು ಶಾಲೆಯ ಸನ್ನಿವೇಶವನ್ನು ತೆಗೆದುಕೊಂಡು ದಯೆ ಎಂಬಕಲ್ಪನೆಯ ಮಕ್ಕಳು ಮತ್ತು ಮಾಸ್ತರರಿಂದ ಶುರು ಮಾಡುತ್ತಾರೆ. ಈ ನಾಟಕದಲ್ಲಿ ನಾಟಕಕಾರರು ಕತೆಯ ಮೂಲಕವೇ ಬಸವಣ್ಣನವರ ತತ್ವಗಳನ್ನು ತಿಳಿಸುತ್ತಾ ಹೋಗುತ್ತಾರೆ. ಆಕಳ ಕತೆಯ ಮೂಲಕ ವಿದ್ಯಾರ್ಥಿಗಳಿಗೆ ಅಣ್ಣನವರು ಸಕಲರಿಗೂ ಲೇಸ ಬಯಸಿದರು. ಕಳ್ಳರನ್ನು ಒಳ್ಳೆಯವರನ್ನಾಗಿಸಿದರು, ಪಾಪಿಗಳನ್ನು ಕೊಲ್ಲಲಿಲ್ಲ.

ನಾಟಕಕಾರರು ಈ ನಾಟಕದ ಮೂಲಕ ಕಳ್ಳತನ ಮಾಡುವುದನ್ನು ಬಸವಣ್ಣ ನಿಲ್ಲಿಸಿದನು. ಅದರ ಮೂಲಕ 'ಕಾಯಕವೇ ಕೈಲಾಸ' ಎಂಬ ತತ್ವವನ್ನು ತಿಳಿಸಲು ಹೊರಟಿದ್ದಾರೆ.

ಈ ನಾಟಕದ ಕೊನೆಯಲ್ಲಿ ಬರುವ ವಚನ ಬಹಳ ಸ್ವಾರಸ್ಯವಾಗಿದೆ.

ಇವನಾರವ ಇವನಾರವ ಎಂದೆನಿಸದಿರಯ್ಯಾ
ಇವ ನಮ್ಮವ ಇವ ನಮ್ಮವ ಎಂದೆನಿಸಯ್ಯಾ
ಕೂಡಲಸಂಗಮದೇವಾ,
ಇವ ನಿಮ್ಮ ಮನೆಯ ಮಗನೆಂದೆನಿಸಯ್ಯಾ ॥

ಡಾ.ಸಿದ್ರಾಮ ಕಾರಣಿಕರು ಬರೆದ "ಕಲ್ಯಾಣಕ್ಕೆ ಅಲ್ಲ ಈ ದಾರಿ" ಎಂಬ ನಾಟಕ ಹನ್ನೆರಡನೆಯ ಶತಮಾನದ ಸಾಮಾಜಿಕ, ಧಾರ್ಮಿಕ ಸಂದರ್ಭದಲ್ಲಿ ಬಸವಣ್ಣ ಮತ್ತು ಅವರ ಕುಟುಂಬಕ್ಕೆ ಒದಗಿದ ಸ್ಥಿತಿಗತಿಗಳಿಗೆ ಸಂಬಂಧಿಸಿದಂತೆ ಬರೆದ ನಾಟಕವಾಗಿದೆ. ಈ ನಾಟಕವು ಹನ್ನೊಂದು ದೃಶ್ಯಗಳಿಂದ ಕೂಡಿದೆ.

ನಾಟಕದ ಮುನ್ನುಡಿಯಲ್ಲಿ ಬಸವಣ್ಣ ಮತ್ತು ಆತನ ಅಣ್ಣ ದೇವರಾಜನಿಗೂ ಮನಸ್ತಾಪವಿತ್ತು ಎಂಬ ಅಂಶವನ್ನು ಹೇಳುತ್ತಾ ಹೋಗುತ್ತಾರೆ. ಅದಕ್ಕಿಂತ ಈ ಕೆಳಗಿನ ವಚನವನ್ನು ಹೇಳುತ್ತಾರೆ

"ಅಣ್ಣ-ತಮ್ಮ ಹೆತ್ತಣ್ಣ ಗೋತ್ರವಾದರೇನು
ಲಿಂಗ ಸಾಹಿತ್ಯವಿಲ್ಲದವರ ಎನ್ನವರೆನ್ನೆಯ್ಯ
ನಂಟು ಭಕ್ತಿ ನಾಯಕ ನರಕ
ಕೂಡಲಸಂಗಮದೇವಾ".

ಈ ವಚನವನ್ನು ಮೇಲಿನ ಮಾತಿಗೆ ಪುಷ್ಟಿಯನ್ನು ನೀಡುತ್ತದೆ ಎಂಬ ಅಭಿಪ್ರಾಯವನ್ನು ಸಿದ್ರಾಮ ಕಾರಣಿಕರು ಅಭಿಪ್ರಾಯಪಡುತ್ತಾರೆ.

ದೃಶ್ಯ-೪ರಲ್ಲಿ ನಡೆಯುವ ಹುಡುಗನಾಗಿದ್ದ ಬಸವ ಮತ್ತು ಆತನ ತಾಯಿಯಾದ ಮಾದಲಾಂಬೆಯವರ ನಡುವಿನ ಸಂವಾದ ಬಹಳ ಸ್ವಾರಸ್ಯಕರವಾಗಿದೆ. ಬಸವಣ್ಣ ಕೇಳುವ ಪ್ರಶ್ನೆಗಳು ಬಹಳ ಅರ್ಥವಂತಿಕೆಯಿಂದ ಕೂಡಿರುತ್ತವೆ.

"ಬಸವ : ಅವ್ವಾ ನನಗ ಯಾಕೋ ನಮ್ಮ ಸುತ್ತಮುತ್ತಲಿನ ಪರಿಸರ ಸರಿ ಅನ್ನಿಸವಲ್ಲು! ಅಲ್ಲ ನಾವೆಲ್ಲ ಬೆಕ್ಕು, ನಾಯಿ ಎಲ್ಲಾ ಪ್ರಾಣಿಗಳನ್ನು ಸಾಕತೇವಿ. ಅವು ಹೊಲಸ ಮಾಡಿದರ ತೊಳೆತೇವಿ ಮ್ಯಾಲ ಅವುಗಳನ್ನು ಎತ್ತಿ ಮುದ್ದಾಡ್ತೇವಿ. ಮನೆಯೊಳಗ ಅವು ಎಲ್ಲಿ ಬೇಕೆಂದಲ್ಲಿ ತಿರುಗುತಾವು. ನಾವು ಖುಷಿಪಡ್ತೇವಿ, ಆದರ...... ಆದರ.....

ಮಾದಲಾಂಬೆ: ಮತ್ತೇನು ಶುರು ಮಾಡ್ದಿ? ಒಗಟಾ ಹಾಕ್ಲಿಕತ್ತಿ?

ಬಸವ : ಇದು ಒಂಥರಾ ಒಗಟಾನ ಅನ್ನು, ಅವ್ವಾ ಈ ಪ್ರಾಣಿ ಪಕ್ಷಿಗಳನ್ನು ಮುಟ್ಟೇವಿ. ಮುದ್ದಾಡ್ತೇವಿ ಆದರ... ಊರ ಹೊರಗಿರೋ ಕೇರಿ ಜನರನ್ನು ಕಂಡ ಹಾವ ಕಂಡಾಂಗ ಯಾಕ ಮಾಡ್ಬೇಕಂತೀನಿ?

ಮಾದಲಾಂಬೆ: ಬಸವಾ!...ನಮ್ಮ ಧರ್ಮ ಹಂಗ ಹೇಳತದ, ನಾವೂ ಅದರಂಗ ನಡೀಬೇಕಾಗ್ತದ.

ಬಸವ : ಇದೆಂಥಾ ಧರ್ಮ ಅವ್ವಾ? ಮನುಷ್ಯ ಮನುಷ್ಯರೊಳಗೆ ಮೇಲು-ಕೀಳು ಅಂತ ಮಾಡಿ ಅವರನ್ನು ಇವ್ರು, ಇವರನ್ನು ಅವ್ರು, ಮುಟ್ಟಬಾರ್ದು, ಮುಟ್ಟಿಸಿಕೊಳ್ಳಬಾರದು ಎಂದು ಹೇಳುವುದು ಎಂಬುದು ಧರ್ಮ ಎಂದು ಯಾಕೆ ಕರೀಬೇಕು? ಮನುಷ್ಯರೆಲ್ಲಾ ಒಂದು ಅಂತ ಹೇಳದಿದ್ರೆ ಅದೆಂಥ ಧರ್ಮ? ಎಂದು ತನ್ನ ಚಿಕ್ಕ ವಯಸ್ಸಿನಲ್ಲಿಯೇ ತನ್ನ ಪ್ರಜ್ಞೆಯನ್ನು ತನ್ನ ತಾಯಿಯ ಮುಂದೆ ಇಡುತ್ತಾನೆ. ನಾಟಕಕಾರರು ಧರ್ಮದ ಕುರಿತಾಗಿ ಅದರಲ್ಲೂ ಮನುಷ್ಯನ "ಮನುಷ್ಯತ್ವ"ವನ್ನು ಎತ್ತಿಹಿಡಿಯಲು ಹೊರಟ್ಟಿದ್ದಾರೆ".[೨೧]

ಈ ನಾಟಕದ ವಿಶೇಷವೆಂದರೆ ಬಸವಣ್ಣನ ಅಣ್ಣನನ್ನು ಕುರಿತು ನಾಟಕಗಳು ಪ್ರಸ್ತಾಪಿಸಿರುವುದು ಕಡಿಮೆ. ಆದರೆ ಈ ನಾಟಕ ಬಸವಣ್ಣನ ಅಣ್ಣನಾದ ದೇವರಾಜನ ಪಾತ್ರದೊಂದಿಗೆ ಬಸವಣ್ಣನನ್ನು ಮಾತನಾಡಿಸುವ ಕೆಲಸವನ್ನು ನಾಟಕಕಾರರು ಮಾಡಿದ್ದಾರೆ. ಒಂದು ಕುಟುಂಬದ ಜೊತೆ ವಿಚಾರಗಳನ್ನು ಹಂಚಿಕೊಳ್ಳಲು ಸನ್ನಿವೇಷವನ್ನು ಸೃಷ್ಟಿಸಿದ್ದಾರೆ. ಬಸವಣ್ಣ ದೃಶ್ಯ-೬ರಲ್ಲಿ ಗಂಡು-ಹೆಣ್ಣಿನ ತಾರತಮ್ಯತೆಯ ಬಗ್ಗೆ ಹೇಳುವ ಮಾತುಗಳು ಬಹಳ ಅರ್ಥವಂತಿಕೆಯಿಂದ ಕೂಡಿರುತ್ತವೆ.

ಬಸವ : ಅಪ್ಪಾ, ಅಕ್ಕನಿಗೆ ಮುಂಜಿಮಾಡಿ ಜನಿವಾರ ಹಾಕಿದ್ದೀರಿ!

ಮಾದರಸ: ಬಸವಾ! ಈಗ್ಯಾಕ ಆಮಾತು?

ಬಸವ : ಅಕ್ಕನಿಗೆ ಇಲ್ಲದ ಜನಿವಾರ ನನಗ ಯಾಕ ಹಾಕ್ತೀರಿ?

ಮಾದರಸ: ಅದು ನಮ್ಮ ಧರ್ಮ

ಬಸವ : ಹೆಣ್ಣಿಗೊಂದು ನಿಯಮ ಗಂಡಿಗೊಂದು ನಿಯಮ, ಇಂಥಾ ನಿಯಮ ಧರ್ಮದೊಳಗೆ ಯಾಕಪ್ಪ? ಹಂಗ ಭೇದ ಮಾಡೋ ಧರ್ಮ ಧರ್ಮಾನೇ ಅಲ್ಲ ಎಂದು ತನ್ನ ತಂದೆಗೆ ಪ್ರಶ್ನೆ ಹಾಕುತ್ತಾನೆ.

ಈ ನಾಟಕವು ಇತರ ನಾಟಕಗಳಿಗಿಂತ ಭಿನ್ನತೆಯನ್ನು ಹೊಂದಿದೆ. ಕಾರಣ ಎಲ್ಲಾ ನಾಟಕಗಳು ಬಸವಣ್ಣ ಉಪನಯನವನ್ನು ಬಸವಣ್ಣ ತಿರಸ್ಕರಿಸಿದನು ಎಂದು ಹೇಳಿದರೆ "ಕಲ್ಯಾಣಕ್ಕೆ ಅಲ್ಲ ಈ ದಾರಿ"ಯ ನಾಟಕದಲ್ಲಿ ತನ್ನ ತಂದೆ-ತಾಯಿಯ, ಅಣ್ಣನ ಮಾತಿಗೆ ಕಟ್ಟು ಬಿದ್ದು ಉಪನಯನಕ್ಕೆ ಬದ್ಧನಾಗಿದ್ದನೆಂದು ತಿಳಿಸುತ್ತದೆ. ಅದಕ್ಕೆ ಪುಷ್ಟಿಯಾಗಿ ಬಸವಣ್ಣನ ಈ ಮಾತು ಪುಷ್ಟೀಕರಿಸುತ್ತದೆ.

"ಬಸವ : ಹಿಂಗ, ನೀವೆಲ್ಲಾ ಹೇಳ್ತಿರಿ ಅಂದ ಮ್ಯಾಲ ನಾ ಜಿಗದಾಡಿದರ ಆಕಾಶೇನ ಹರಿಯೋದದ? ನೀವ್ ಹೇಳಿದ್ದಾಂಗ ಆಗ್ಲಿ. ನಾಳಿ ನಾ ಸುಮ್ನ ಇರ್ತೇನಿ ಹರಕೆಯ ಕುರಿಯಾಗಿ......"[೨೨]

ನಾಟಕಕಾರರು ಈ ನಾಟಕದ ಮೂಲಕ ಬಸವಣ್ಣನ ತತ್ವಗಳು ಏನೇ ಇದ್ದರೂ ಸಮಾಜಕ್ಕೆ ಬದ್ಧನಾಗಿರಲೇಬೇಕಾಯಿತು. ಧರ್ಮ ಆತನನ್ನು ಬಿಡಲೇ ಇಲ್ಲ ಎಂಬುದನ್ನು ಹೇಳಲು ಹೊರಟಿದ್ದಾರೆ. ಹಾಗಾಗಿ ಈ ನಾಟಕ ಬಸವಣ್ಣನ ಬಾಲ್ಯವನ್ನೇ ಮಾತ್ರ ತೆಗೆದುಕೊಂಡು ಬರೆದ ನಾಟಕವಾಗಿದೆ. ಈ ನಾಟಕದ ಮೂಲಕ ಲೇಖಕರ ವಾದವೆಂದರೆ ಬಸವಣ್ಣನಿಗೆ ಉಪನಯನವಾಗುತ್ತದೆ ಎಂಬಂತೆ ಕಾಣುತ್ತದೆ. ಅಂದಿನ ಕಾಲದಲ್ಲಿ ಧರ್ಮದ ಚೌಕಟ್ಟನ್ನು ಮುರಿದು, ಧರ್ಮದ ನಿಯಮಗಳನ್ನು ಮುರಿಯಲು

ಉಲ್ಲಂಘನೆ ಮಾಡಲು ಮತ್ತು ಒಂದು ಪಕ್ಷ ಮಾಡಿದರೆ ಉಳಿಗಾಲವಿಲ್ಲ ಎಂಬುದನ್ನು ಹೇಳಲು ಹೊರಟಂತೆ ಈ ನಾಟಕ ಕಂಡುಬರುತ್ತದೆ.

ಕೆ.ಎಂ ರೇವಣ್ಣನವರು ಬರೆದ "ಶರಣೆ ಅಕ್ಕ ನಾಗಮ್ಮ" ಎಂಬ ನಾಟಕದಲ್ಲಿ ಬಸವಣ್ಣ ಮತ್ತು ಆತನ ಅಕ್ಕಳಾದ ಅಕ್ಕ ನಾಗಮ್ಮನೊಂದಿಗಿನ ಸಂಬಂಧವನ್ನು ಹೇಳಲು ಹೊರಟಿದ್ದಾರೆ. ಅದಕ್ಕೆ ಪುಷ್ಟಿಯಾಗಿ ಈ ಕೆಳಗಿನ ಮಾತುಗಳನ್ನು ಗಮನಿಸಬಹುದು.

"ಮಾದಲಾಂಬಿಕೆ: ಬಾಲಕ ಬಸವ.... ನಿನ್ನಕ್ಕನನ್ನು ಹೋಗಗೊಡು ಮಗು, ಹಠ ಮಾಡಬೇಡ, ಪ್ರತಿಯೊಬ್ಬ ಹೆಣ್ಣಿನ ಬಾಳಿನಲ್ಲೂ ಬರುವ ವಿಧಿಯಿದು. ಅವಳು ತನ್ನ ಗಂಡನ ಮನೆಗೆ ಇಂಗಳೇಶ್ವರಕ್ಕೆ ಹೋಗುತ್ತಿರುವಳು. ಸುಖವಾಗಲೆಂದು ಹಾರೈಸು ಕಂದ.... ಏಳು ನಾಗವ್ವ ಇದೇನಿದು ನಿನ್ನಾಟ ನಿನ್ನ ಪತಿ ದೇವರಿಗೆ ನೋವಾಗದಂತೆ ನಡೆದುಕೋ ಕಂದ.

ಬಾಲ ಬಸವಣ್ಣ: ನಮ್ಮ ಮನೆಯನ್ನು ಬಿಟ್ಟು ಹೋಗುವಳೆ? ಹಾಗಾದರೆ ನಾನು ಇಲ್ಲಿ ಇರುವುದಿಲ್ಲ. ನಾನೂ ಮನೆಯನ್ನು ಬಿಟ್ಟು ಹೋಗುವೆ; ಅಕ್ಕನ ಜೊತೆ ಎನ್ನುತ್ತಾ ದುಃಖಿಸುವನು ಮತ್ತು ಅಕ್ಕನು ಕೂಡ ದುಃಖಿಸುವಳು".[೨೩]

ಹಾಸಿಗೆ ಇದ್ದಷ್ಟು ಕಾಲುಚಾಚು ಎನ್ನುವ ಪರಿಕಲ್ಪನೆಯೊಂದಿಗೆ ಬಸವಣ್ಣನ ಮೂಲಕ ಈ ಬೇಕು ಬೇಕು ಎನ್ನುವ ಆಸೆಗೆ ಕೊನೆಯುಂಟೆ? ನಿರ್ಮಲ ಹೃದಯವಳಾದ ನಿನ್ನಲ್ಲಿಯೂ ಆಸೆಯ ಕಳಂಕ ಹತ್ತಿದೆ? ಬೇಡ ಬೇಡ, ತನ್ನ ಅಕ್ಕನಿಗೆ ಹೇಳುವಾಗ,

ವಿಷಯವೆಂಬ ಹಸುರೆನ್ನೆನ್ನ ಮುಂದೆ ಪಸರಿಸದಿರು ತಂದೆ
ಪಶುವೇನು ಬಲ್ಲದು! ಹಸರೆಂದೆಳಸುವುದು!
ವಿಷಯರಹಿತವ ಮಾಡಿ ಭಕ್ತಿರಸವ ದಣಿಯ ಮೇಯಿಸಿ
ಸುಬುದ್ಧಿಯೆಂಬ ಉದಕವನೆರೆದು ನೋಡಿ ಸಲವು ದೇವಾ...!

ದೃಶ್ಯ-೯ರಲ್ಲಿ ಕಾಯಕದ ಬಗ್ಗೆ ನಾಟಕಕಾರರು ಮಾತನಾಡಿಸುವಾಗ ಗಂಗಾಂಬಿಕೆ ಪೀಠದಲ್ಲಿ ವಿಶ್ರಮಿಸಿಕೊಳ್ಳಿ, ಪ್ರಸಾದದ ವೇಳೆಯಾಗಿದೆ. ಸ್ನಾನ, ಪೂಜೆ ಮುಗಿಸಿ.... ಪ್ರಭುಗಳು ಇಂದೇಕೋ ಬಳಲಿದಂತಿದೆ? ಆಗ ಬಸವಣ್ಣನವರು ಹೇಳುವ ಮಾತು ಸಮಾಜಕ್ಕೆ ಹೇಳುವ ಮಾತಿನಂತೆ ಕಾಣುತ್ತದೆ. ಬಳಲಿಕೆ ಎಲ್ಲಿಂದ ಬರಬೇಕು ಗಂಗಾ, ಕಾಯಕದಲ್ಲಿ ನಿರತನಾದೊಡೆ ಬಳಲಿಕೆ, ಬೇಸರಿಕೆಯನ್ನು ಮರೆಯಬೇಕು. ಈ ನಾಟಕ ನಾಗಲಾಂಬಿಕೆಯ ಅಳಿಯ ಚೆನ್ನಣ್ಣ ಇದ್ದ ಎಂಬ ಅಂಶವನ್ನು ಹೇಳುತ್ತದೆ.

ನಾಟಕಕಾರರು ಅಕ್ಕ ನಾಗಮ್ಮ ಪಾತ್ರದ ಮೂಲಕ ಬಸವಣ್ಣನ ತತ್ವಗಳನ್ನು ತರಲು ಪ್ರಯತ್ನಿಸಿದ್ದಾರೆ.

"ಕೊಲುವವನೇ ಮಾದಿಗ
ಹೊಲಸು ತಿಂಬುವವನೇ ಹೊಲೆಯ
ಕುಲವೇನು ಅವಂದಿರ ಕುಲವೇನು!
ಸಕಲ ಜೀವಾತ್ಮರಿಗೂ ಲೇಸನೇ
ಬಯಸುವ ನಮ್ಮ ಕೂಡಲಸಂಗನ
ಶರಣರೇ ಕುಲಜರು!"[೨೪]

ಲಿಂಗದೀಕ್ಷೆಯಾದ ಮೇಲೆ ತನ್ನ ಪೂರ್ವಾಶ್ರಮವನ್ನು ಮರೆಯಬೇಕು. ಸ್ಪೃಶ್ಯ-ಅಸ್ಪೃಶ್ಯವೆಂಬ ಭೇದವಿಲ್ಲದೇ ಜಾತ್ಯಾತೀತ ಸಮಾಜ ನಮ್ಮ ಗುರಿಯಾಗಬೇಕು. ಕಾಯಕ ಅವರವರ ಜೀವನಾಧಾರಾಗಬೇಕೆ ಹೊರತು, ಜಾತಿ ಸೂಚಕವಾಗಬಾರದು. ಸತ್ಯಶುದ್ಧ ಕಾಯಕದಿಂದ ಜೀವನ ಸಾಗಿಸಬೇಕು. ಈ ಎಲ್ಲಾ ಮಾತುಗಳು ನಿಜವಾಗಿಯೂ ಸಮಾಜಕ್ಕೆ ಪ್ರಸ್ತುತವಾಗುತ್ತದೆ. ಶರಣ ಚಳುವಳಿ ಎಷ್ಟನೇ ಶತಮಾನದಲ್ಲಿ ನಡೆಯಿತು ಎನ್ನುವುದು ಮುಖ್ಯವಲ್ಲ. ಅವರ ತತ್ವಗಳು, ಸಿದ್ಧಾಂತಗಳು ಏನನ್ನು ಹೇಳುತ್ತಿವೆ ಎಂಬುದರ ಕಡೆಗೆ ಗಮನ ಹರಿಸುವುದು ಮುಖ್ಯವಾಗುತ್ತದೆ.

"ಛಲಬೇಕು ಶರಣಂಗೆ ಪರಧನವನೊಲ್ಲೆನೆಂಬ
ಛಲಬೇಕು ಶರಣಂಗೆ ಪರಸತಿಯನೊಲ್ಲೆನೆಂಬ
ಛಲಬೇಕು ಶರಣಂಗೆ ಪರದೈವವನೊಲ್ಲೆನೆಂಬ
ಛಲಬೇಕು ಶರಣಂಗೆ ಲಿಂಗಜಂಗಮ ಒಂದೇ ಎಂಬ
ಛಲವಿಲ್ಲದವರ ಮೆಚ್ಚ ಕೂಡಲ ಸಂಗಮದೇವಾ"[೨೫] ॥

ಅಕ್ಕನಾಗಮ್ಮ ಪ್ರಧಾನಮಂತ್ರಿಯ ಪದವಿಯನ್ನು ತ್ಯಾಗ ಮಾಡುವುದರಲ್ಲಿ ನೀನು ದುಡುಕಿದೆ ಎಂದಾಗ ಅಲ್ಲದೇ ಶರಣಧರ್ಮವನ್ನು ಸಾಧಿಸುವುದು ಬಹಳಕಷ್ಟಿದೆ. ಅಧಿಕಾರವನ್ನು ಬಿಟ್ಟರೆ ಮುಂದೆ ಸಾಧ್ಯವಾಗುವುದೇ ಎಂದಾಗ ಅಕ್ಕ ಸಮಾಜ ಸೇವೆ ನನ್ನ ಪ್ರಾಣ, ನನ್ನ ಉಸಿರು ಇದನ್ನು ನಿಮ್ಮ ಅಧಿಕಾರದಲ್ಲಿರುವ ಎಂದರೆ ಜೀವಂತಶವವಾಗಿ ಅಧಿಕಾರದಲ್ಲಿ ಇರಲೋ? ಆತ್ಮ ಸ್ವಾತಂತ್ರ್ಯವನ್ನು ಕಳೆದುಕೊಂಡು ಪ್ರಧಾನಮಂತ್ರಿಯಾಗಿರಲೇ? ಎಂದು ತನ್ನ ಸಾಮಾಜಿಕ ಕಳಕಳಿಯ ಕುರಿತು ತನ್ನ ಅಕ್ಕನೊಂದಿಗೆ ಹೇಳುತ್ತಾನೆ.

ಅಕ್ಕನಾಗಮ್ಮ ಬಸವಣ್ಣನವರು ಐಕ್ಯರಾದ ಸುದ್ಧಿಯನ್ನು ತಿಳಿದ ಮೇಲೆ ಹೇಳುವ ವಚನ ಬಹಳ ವಿವೇಚನೆಯಿಂದ ಕಂಡಿದೆ. ಬಸವಣ್ಣನು ಹೋದ ಮೇಲೆ ಏನೆಲ್ಲಾ ಶೂನ್ಯವಾಯಿತು ಎಂಬುದನ್ನು ಈ ವಚನದಲ್ಲಿ ಕಾಣಬಹುದು.

"ಬಸವಣ್ಣ! ನೀವು ಮರ್ತ್ಯಕ್ಕೆ ಬಂದು ನಿಂತಡೆ
ಭಕ್ತಿಯ ಬೆಳವಿಗೆ ದೆಸೆದೆಸೆಗೆಲ್ಲಾ ಪಸರಿಸತ್ತಲ್ಲ
ಅಯ್ಯ-ಸ್ವರ್ಗ, ಮರ್ತ್ಯ, ಪಾತಾಳದೊಳಗೆಲ್ಲಾ
ನಿಮ್ಮ ಭಕ್ತಿಯ ಬೆಳವಿಗೆ ಘನವನಾರು ಬಲ್ಲರು
ಶಶಿಧರ ನೆಚ್ಚಿದ ಮಣಿಹ ಪೂರೈಸಿತ್ತೆಂದು ನೀವು
ಲಿಂಗೈಕ್ಯವಾದೆ ॥

ನಿಮ್ಮೊಡನೆ ಭಕ್ತಿ ಹೋಯಿತ್ತಲ್ಲ,
ನಿಮ್ಮೊಡನೆ ಸದಾಚಾರ ಹೋಯಿತ್ತಲ್ಲ,
ನಿಮ್ಮೊಡನೆ ಅಸಂಖ್ಯಾತ ಮಹಾಗಣಂಗಳು ಹೋದರಣ್ಣ
ಮರ್ತ್ಯದ ಮಹಾಮನೆ ಶೂನ್ಯವಾಯಿತ್ತಲ್ಲ ಬಸವಣ್ಣ
ಎನ್ನ ನೊಯ್ಯದೇ ಹೋದೆಯಲ್ಲಾ ಪಂಚ ಪರುಶ
ಮೂರ್ತಿ ಬಸವಣ್ಣ ॥

ಬಸವಣ್ಣ ಪ್ರಿಯ ಚನ್ನ ಸಂಗಯ್ಯಂಗೆ ಪ್ರಾಣಲಿಂಗವಾಗಿ
ಹೋದೆಯಲ್ಲಾ ಸಂಗನ ಬಸವಣ್ಣ[೨೬] ॥

ಈ ಎಲ್ಲಾ ನಾಟಕಗಳಲ್ಲಿ ಬಸವಣ್ಣನ ತತ್ವ ಸಿದ್ಧಾಂತಗಳು ಅವುಗಳೇ ಪುನರಾವರ್ತನೆ ಆದರೂ ನೋಡಿರುವ ಬಗೆಗಳು ಭಿನ್ನವಾಗಿ ಕಾಣುತ್ತವೆ. ನಾಟಕದ ಪಾತ್ರಗಳು ತಿಳಿಸುವ ದೃಷ್ಟಿಕೋನಗಳು ಭಿನ್ನತೆಯಿಂದ ಕೂಡಿರುತ್ತವೆ. ಹಾಗಾಗಿ ಬಸವಣ್ಣನ ತತ್ವ ಸಿದ್ಧಾಂತಗಳು ಏಕರೂಪಿಯಾಗಿ ಸಿಗದೇ ಬಹುರೂಪಿಯಾಗಿ ಸಿಗುತ್ತವೆ.

## ಕೊನೆ ಟಿಪ್ಪಣಿಗಳು

೦೧. **ಬಸವತತ್ವ ಸಾಮಾಜಿಕ ಬದಲಾವಣೆ**, ಡಾ.ರಹಮತ್ ತರೀಕೆರೆ ಲೇಖನ, ಪು.ಸಂ.೧೦೬

೦೨. ಮರುಳಸಿದ್ಧಪ್ಪ.ಕೆ., ಸಾಧನೆ, "ಸಂಕ್ರಾಂತಿ ಒಂದು ಸಾಂಸ್ಕೃತಿಕ ಅಧ್ಯಯನ" ಲೇಖನ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೭೮, ಪು.ಸಂ.೧೩೩

೦೩. ಸಂಕ್ರಾಂತಿ ನಾಟಕ, ಪಿ.ಲಂಕೇಶ., ಪು.ಸಂ.೦೬

೦೪. ಕಂಬಾರರ ಶಿವರಾತ್ರಿ ನಾಟಕ, ಪು.ಸಂ.೧೭

೦೫. ಮಹಾಚೈತ್ರ, ಎಚ್.ಎಸ್.ಶಿವಪ್ರಕಾಶ್., ನವಕರ್ನಾಟಕ ಪಬ್ಲಿಕೇಷನ್, ಬೆಂಗಳೂರು, ೧೯೮೬., ಪು.ಸಂ ೨೬

೦೬. ಅದೇ ನಾಟಕ ಪು.ಸಂ ೩೦

೦೭. ಅದೇ ನಾಟಕ ಪು.ಸಂ ೩೪

೦೮. ಅ.ನ.ಕೃ., ಜಗಜ್ಯೋತಿ ಬಸವೇಶ್ವರ, ಶಾರದಾ ಪ್ರಕಟನಾಲಯ, ಬೆಂಗಳೂರು, ಪು.ಸಂ.೧೪

೦೯. ಅದೇ ನಾಟಕ ಪು.ಸಂ.೨೭

೧೦. ಅದೇ ನಾಟಕ ಪು.ಸಂ.೫೪

೧೧. ಬಸವಣ್ಣ: ಪುನರ್ಲೇಖ, ಡಾ.ಕರೀಗೌಡ ಬೀಚನಹಳ್ಳಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.ಸಂ.೧೧೪

೧೨. ಡಾ.ಸಿದ್ಧಯ್ಯ ಪುರಾಣಿಕರ ಸಮಗ್ರ ನಾಟಕಗಳು, ಶ್ರೀಗಿರಿ ಪ್ರಕಾಶನ, ಆಸ್ಕರ್ ರಸ್ತೆ, ಬೆಂಗಳೂರು, ೨೦೧೦, ಪು.ಸಂ.೧೬

೧೩. ಅದೇ ನಾಟಕ ಪು.ಸಂ.೫೫

೧೪. ಅದೇ ಪು.ಸಂ ೧೦೪

೧೫. ಜಗಜ್ಯೋತಿ ಬಸವೇಶ್ವರ-ಸಂಯೋಜನೆ., ಏಣಗಿ ಬಾಳಪ್ಪ, ಶ್ರೀ ಬಸವೇಶ್ವರ ಪೀಠ ಪ್ರಕಾಶನ, ಡಾ.ಆರ್.ಸಿ. ಹಿರೇಮಠ ಕನ್ನಡ ಅಧ್ಯಯನ ಪೀಠ, ಧಾರವಾಡ, ೧೯೫೬, ಪು.ಸಂ.೧, ೨

೧೬. ಅದೇ ಪು.ಸಂ ೪೨

೧೭. ಮಹಾಸಂಗಮ, ಜಿ.ಎಚ್.ಹನ್ನೆರಡುಮಠ, ಪು.ಸಂ.೨೬

೧೮. ಅದೇ ಪು.ಸಂ ೩೫

೧೯. ಅದೇ ಪು.ಸಂ ೩೮

೨೦. ಅದೇ ಪು.ಸಂ ೪೫

೨೧. ಕಲ್ಯಾಣಕ್ಕೆ ಅಲ್ಲ ಈ ದಾರಿ, ಡಾ.ಸಿದ್ರಾಮ ಕಾರಣಿಕ, ಮಾತಾಪ್ರಿಂಟರ್, ಮೈಸೂರು, ೨೦೦೯, ಪು.ಸಂ.೩೮

೨೨. ಅದೇ ಪು.ಸಂ ೪೯

೨೩. ಶರಣೆ ಅಕ್ಕನಾಗಮ್ಮ, ಲೇಖಕರು ಕೆ.ಎಂ.ರೇವಣ್ಣ, ಅಕ್ಕನಾಗಮ್ಮ ಪ್ರಕಾಶನಾಲಯ, ತರೀಕೆರೆ, ೧೯೮೩., ಪು.ಸ.೫

೨೪. ಅದೇ ಪು.ಸಂ ೪೦

೨೫. ಅದೇ ಪು.ಸಂ ೪೧

೨೬. ಅದೇ ಪು.ಸಂ ೬೩

## ಅಧ್ಯಾಯ–೦೫
## ಬಸವಣ್ಣನ ಕುರಿತು ಬಂದಿರುವ ಆಧುನಿಕ ನಾಟಕಗಳ ವೈಶಿಷ್ಟ್ಯತೆ ಮತ್ತು ಆಶಯಗಳು

ಆಧುನಿಕ ಕನ್ನಡ ನಾಟಕಗಳಲ್ಲಿನ ವೈಶಿಷ್ಟ್ಯತೆಗಳನ್ನು ಈ ಅಧ್ಯಾಯದಲ್ಲಿ ನೋಡುತ್ತಿದ್ದೇನೆ. ಅಂದರೆ ಶಿವರಾತ್ರಿ, ಮಹಾಚೈತ್ರ, ತಲೆದಂಡ, ಸಂಕ್ರಾಂತಿಗಳಲ್ಲಿನ ವೈಶಿಷ್ಟ್ಯತೆಗಳೇನು? ಎಂಬುದನ್ನು ಹುಡುಕುವ ಪ್ರಯತ್ನ ಈ ಅಧ್ಯಯನದಲ್ಲಿದೆ.

ಶಿವರಾತ್ರಿ ನಾಟಕವು ೧೨ನೇ ಶತಮಾನದ ವಚನಯುಗದ ಕಲ್ಯಾಣ ನಗರದಲ್ಲಿ ನಡೆಯುವ ಕಥಾ ವಸ್ತುವಾಗಿದೆ. ಶಿವರಾತ್ರಿಯ ಒಂದು ರಾತ್ರಿಯಲ್ಲಿಯೇ ಇಡೀ ನಾಟಕ ತನ್ನ ಕತೆಯನ್ನು ತಿಳಿಸುತ್ತದೆ. ನಾಟಕವು ಬಸವಣ್ಣನ ಕಥೆಯನ್ನು ಹೊಂದಿದ್ದರೆ ಅಷ್ಟು ವಿಶೇಷವಾಗುತ್ತಿರಲಿಲ್ಲ. ಬದಲಿಗೆ ನಾಟಕವು ಎಂತಹ ಸನ್ನಿವೇಶದಲ್ಲಿ, ಯಾವ ಸ್ಥಳದಲ್ಲಿ ಮತ್ತು ಎಂತಹ ಕಥಾವಸ್ತುವನ್ನಿಟ್ಟುಕೊಂಡು ಬೆಳೆಯುತ್ತದೆ ಎಂಬುದೇ ವಿಶೇಷ. ಇತ್ತೀಚಿನ ನಾಟಕಗಳನ್ನು ಗಮನಿಸಿದರೆ ಅಲ್ಲಿ ಸೂತ್ರಧಾರನ ಪಾತ್ರವಾಗಲೀ, ಭಾಗವತನ ಪಾತ್ರವಾಗಲೀ, ನಿರೂಪಕನ ಪಾತ್ರವಾಗಲೀ, ನಮ್ಮ ಕಣ್ಣಿಗೆ ಬೀಳುವುದಿಲ್ಲ. ಆದರೆ ಕಂಬಾರರು ತಮ್ಮ ನಾಟಕಗಳಲ್ಲಿ ಇಂತಹ ಪಾತ್ರಗಳಿಗೆ ಪ್ರಾಶಸ್ತ್ಯವನ್ನು ನೀಡುವುದು ವಿಶೇಷ. ಶಿವರಾತ್ರಿ ನಾಟಕ ಪ್ರಾರಂಭವಾಗುವುದೇ 'ಸೂತ್ರಧಾರ' ಮತ್ತು 'ನಟಿ' ಈ ಇಬ್ಬರ ಸಂವಾದದೊಂದಿಗೆ ಇಲ್ಲಿಯವರೆಗೆ ಆಗಿಹೋದ ಘಟನೆಗಳನ್ನು ತಿಳಿಸಲು ಸೂತ್ರಧಾರ ಮತ್ತು ನಟಿ ಸಹಾಯಕ್ಕೆ ನಿಲ್ಲುತ್ತಾರೆ. ಕಥೆಯಲ್ಲಿನ ಕುತೂಹಲ ಕೆರಳಿಸಲು ಈ ಇಬ್ಬರ ಸಂಭಾಷಣೆ ಮುಖ್ಯವಾಗುತ್ತದೆ. ಬಸವ ಕಲ್ಯಾಣಕ್ಕೆ ಬಂದದ್ದು. ಬಸವನಿಂದ ಬಿಜ್ಜಳ ಪ್ರಭಾವಿತನಾದದ್ದು ಮತ್ತು ಬಸವ ಮಹಾಮನೆಯನ್ನು ಕಟ್ಟಿದ್ದನ್ನು ಸೂತ್ರಧಾರ ಹೇಳಿ ಕಲ್ಯಾಣದ ಏಳ್ಗೆಯನ್ನು ತಿಳಿಸಿದರೆ, ಈ ನಟಿಯು ಕಲ್ಯಾಣವು ಹೇಗೆ ಹಾಳಾಗುವುದರ ಕಡೆಗೆ ಸಾಗಿದೆ ಎಂಬುದನ್ನು ವಿವರಿಸುತ್ತಾಳೆ.

### ೦೧. ಕಾಲಜ್ಞಾನ ಸಾರುವ ಕಲ್ಯಾಣ :

ಕಲ್ಯಾಣದ ನಗರ ದೇವತೆಯನ್ನು ನಾಟಕದಲ್ಲಿ ಒಂದು ಪಾತ್ರವಾಗಿ ತಂದಿರುವುದು ವಿಶೇಷ. ನಾವು ಮತ್ತೆಲ್ಲೂ ಕಾಣಲು ಸಾಧ್ಯವಿರದ ನಗರ ದೇವತೆಯ ಪಾತ್ರ ಕಲ್ಯಾಣದ ಭೂತ, ವರ್ತಮಾನ ಮತ್ತು ಭವಿಷ್ಯತ್ತಿಗೆ ಸಾಕ್ಷಿಯಾಗಿ ನಿಲ್ಲುತ್ತಾಳೆ. ಜನತೆಯ ದೃಷ್ಟಿಯಲ್ಲಿ ಕಲ್ಯಾಣಿಯ ಒಂದೊಂದು ಮಾತಿನಲ್ಲಿಯೂ ನಾನಾ ಅರ್ಥಗಳನ್ನು ಹುಡುಕಬಹುದು. ಕಲ್ಯಾಣಿ ನಾಟಕದೊಳಗೆ ಅಲ್ಲಲ್ಲಿ ಬರುತ್ತಾಳೆ. ಅವಳ ಕಾಲಜ್ಞಾನ ವಿಶೇಷವಾಗಿ ಕಾಣುತ್ತದೆ. ಕಲ್ಯಾಣದ ವಿನಾಶದ ಬಗೆಗೆ ಕಾಲಜ್ಞಾನವನ್ನು ನುಡಿಯುತ್ತಾಳೆ. ಕಲ್ಯಾಣದ ಸಾಮಾನ್ಯ ಜನರಿಗೆ ಇವಳು ಚಿರಪರಿಚಿತಳು, ಆದರೆ ಕಲ್ಯಾಣದ ಜನ ಹುಚ್ಚಿ ಎಂದೇ ಭಾವಿಸಿರುವ ಜನಗಳು ಕಲ್ಯಾಣಿಯನ್ನು ಮತ್ತು ಅವಳ ಮಾತನ್ನು ತಿರಸ್ಕರಿಸದೇ ಇರುವರು. ಕಲ್ಯಾಣದ ಜನಗಳ ಜೊತೆ ಬೆರೆತುಕೊಳ್ಳುವ ಕಲ್ಯಾಣ ರಾಜನ (ಬಿಜ್ಜಳನ) ಸಾವಿಗೂ ಕಾರಣಕರ್ತಳಾಗುತ್ತಾಳೆ. ಹಾಗೂ ಕಲ್ಯಾಣಿ ಸರ್ವಾಂತರಯಾಮಿಯಾಗಿರುವುದರಿಂದ ಕಲ್ಯಾಣಿ ಬಿಜ್ಜಳನ ಸಾವಿನಲ್ಲಿ ಪಾಲ್ಗೊಳ್ಳುವುದು ವಿಶೇಷವಾಗಿದೆ. ಕೆಲವು ಪಾತ್ರಗಳು ವಾಸ್ತವ ನೆಲೆಯಲ್ಲಿದ್ದರೆ ಹುಚ್ಚಿಯಾದ ಕಲ್ಯಾಣ ನಗರ ಲಕ್ಷ್ಮಿ ಮುಂತಾದವರ ಪಾತ್ರಗಳು– ಸಾಂಕೇತಿಕ ನೆಲೆಗಳ ನಡುವೆ ಚರ್ಚಿಸುತ್ತವೆ.

ಬಸವ ಮತ್ತು ಸಂಗಯ್ಯನ ಪ್ರವೇಶದಿಂದಲೇ ಕಲ್ಯಾಣ ಏಳ್ಗೆಯ ಕನಸನ್ನು ಕಂಡ ಕಲ್ಯಾಣಿ, ಬಸವ ನಗರ ತೊರೆದು ಹೋಗುವುದಕ್ಕೆ ಕಾರಣವಾಗುತ್ತಾಳೆ. ಮಾತೃ ಸ್ವರೂಪಿಯಾದ ಕಲ್ಯಾಣದ ನಗರದೇವತೆ

ಕಲ್ಯಾಣದ ಯಶಸನ್ನು ಆನಂದಿಸುತ್ತಾಳೆ. ಹಾಗೆಯೇ ಕಲ್ಯಾಣದ ವಿನಾಶವನ್ನು ಕಂಡು ರೋಧಿಸುತ್ತಾಳೆ. ಇಂತಹ ಅಂಶಗಳನ್ನು ಕೂಡ ನಾಟಕಗಳಲ್ಲಿ ಮಾತ್ರ ನೋಡಲು ಸಾಧ್ಯ

**೦೨. ನಾಟಕದಲ್ಲಿ ಅವತರಿಸುವ ದೇವರು :**

ಶಿವರಾತ್ರಿ ನಾಟಕದಲ್ಲಿ ಒಂದು ಕಡೆ ನಗರದೇವತೆ ಕಲ್ಯಾಣಿ ಕಾಣಿಸಿಕೊಂಡರೆ, ಅದೇ ರೀತಿ ಶಿವನ ಸ್ವರೂಪಿಯಾದ ಸಂಗಯ್ಯನು ಕಾಣಿಸಿಕೊಳ್ಳುತ್ತಾನೆ. ಶಿವರಾತ್ರಿಯ ಇಡೀ ನಾಟಕಕ್ಕೆ ಕಾರಣಕರ್ತನಾಗುವ ಸಂಗಯ್ಯ ಶರಣತತ್ವದ ಪ್ರತೀಕವಾಗಿ ನಿಲ್ಲುತ್ತಾನೆ. ಬಸವನ ಕೇರಿಗೆ ಎಂಬಂತೆ ಅವತರಿಸಿ ಬಂದಿರುವ ಸಂಗಯ್ಯ ಸಾಮಾನ್ಯ ಜನರ ಜೊತೆಯಲ್ಲಿಯೂ ವ್ಯವಹರಿಸಬಲ್ಲ. ಹೊರಕೇರಿಯ ಮುದುಕಪ್ಪ, ಕಾಶವ್ವನೊಡನೆ ಸರ್ವೇಸಾಮಾನ್ಯವಾಗಿ ವ್ಯವಹರಿಸುವ ಸಂಗಯ್ಯ ತಾನು ಸಾಮಾನ್ಯ ಎಂಬುದನ್ನು ನಿರೂಪಿಸುತ್ತಾನೆ.

ದೇವರು ಅವತರಿಸಿ ಸೂಳೆಯ ಮನೆಯಲ್ಲಿ ಲಿಂಗಪೂಜೆ ಆಚರಿಸುವುದು ಅಸಾಮಾನ್ಯ ಸಂಗತಿಯಾಗಿ ಕಾಣುತ್ತದೆ. ಸಂಗಯ್ಯನ ಪಾತ್ರದ ಸೃಷ್ಟಿಯೇ ಸೂಳೆ ಸಾವಂತ್ರಿಯ ವ್ಯಕ್ತಿತ್ವವನ್ನು ಹೆಚ್ಚಿಸುವಲ್ಲಿ ಸಹಾಯಕವಾಗುತ್ತದೆ. ಸಂಗಯ್ಯ ತಾನು ಲಿಂಗಪೂಜೆ ಮಾಡುವುದು ಮಹಾಮನೆಯಲ್ಲೋ, ಬಸವಣ್ಣನ ಮನೆಯಲ್ಲೋ, ಮತ್ತೆಲ್ಲೂ ಅಲ್ಲ, ಅವನು ಆಯ್ಕೆ ಮಾಡಿಕೊಳ್ಳುವುದು ಸೂಳೆ ಸಾವಂತ್ರಿಯ ಮನೆಯನ್ನು. ಸದಾ ಚಪಲವನ್ನುಳ್ಳ ಮನೆಯೆಂಬುದು ತಿಳಿದು ಜನರು ಮತ್ತು ವೇದನೆ ತುಂಬಿದ ವಾತಾವರಣವುಳ್ಳ ಮನೆಯೆಂದು ತಿಳಿದ ಜನರು ಸಾವಂತ್ರಿಯ ಮನೆಯೆಂಬುದು ದೇವರ ಸನ್ನಿಧಿ ಎಂಬಂತೆ ಅರಿವಿಗೆ ತರುತ್ತಾನೆ. ನಾಟಕದ ನಾಂದಿಯಲ್ಲಿ ಬರುವ ಸಂಗಯ್ಯ ನಾಟಕ ಮುಗಿಯುವಾಗ ಭರತ ವಾಕ್ಯವನ್ನು ಸಾರುತ್ತಾನೆ. ಸಾವಂತ್ರಿ ಮತ್ತು ಕಾಮಾಕ್ಷಿಯ ಇಡೀ ಬದುಕಿನ ಚಿತ್ರಣವನ್ನೇ ಬದಲಿಸುವ ಸಂಗಯ್ಯ ಕಲ್ಯಾಣದ ಕಡೆ ಸಾಗುತ್ತಾನೆ. ಸಂಗಯ್ಯನ ಹಿಂದೆ ಬಸವ, ಸಾವಂತ್ರಿ ಇಡೀ ಶರಣ ಸಮೂಹವೇ ಹಿಂಬಾಲಿಸುವುದು ವಿಶೇಷವಾಗುತ್ತದೆ.

**೦೩. ಸಮಾನತೆಯ ತತ್ವ ಮತ್ತು ಕಾಯಕನಿಷ್ಠೆಯ ತತ್ವ :**

ಶಿವರಾತ್ರಿ ನಾಟಕದಲ್ಲಿ ಕಾಮ ಮತ್ತು ಸಮಾನತೆಯ ತತ್ವವು ಒಂದಾಗಿದೆ. ಕಾಮ ಬರೀ ದೇಹಕ್ಕಾಗಿ ಅಲ್ಲ. ಜೀವ ಸಂಬಂಧಿಯಾದ ಕಾಮವು ತತ್ವವಾಗಿಯೇ ಉಳಿಯುತ್ತದೆ. ಕಾಮದ ಮೂಲಕವಾಗಿ ಸಮಾನತೆಯನ್ನು ಸಾಧಿಸಬಹುದಾದರೂ ಬಿಜ್ಜಳನ ಅಧಿಕಾರ ನೀತಿ ಪುರುಷ ಮತ್ತು ಮಹಿಳೆಯರಲ್ಲಿ ಸಮಾನತೆಯನ್ನು ಸಾಧಿಸುವುದಿಲ್ಲ. ಶರಣತತ್ವದಲ್ಲಿ ಸ್ತ್ರೀಗೂ ಸಹಿತ ಸಮಾನ ಸ್ಥಾನವನ್ನು ನೀಡಲಾಗುತ್ತದೆ. ಆದರೆ ಕಂಬಾರರ ಶಿವರಾತ್ರಿಯಲ್ಲಿ ಬಿಜ್ಜಳ ಸಾವಂತ್ರಿಯ ಮನೆಗೆ ಪ್ರವೇಶಿಸುವುದು ಕಾಮ ಸಾಕ್ಷಾತ್ಕಾರಕ್ಕಾಗಿ. ಕಾಮವೇ ಕಣ್ಣಾಗಿರುವ ಕಾಮಾಕ್ಷಿಯ ಜೊತೆಯಲ್ಲಿ ಸೇರಬೇಕೆಂಬ ಉತ್ಕೃಷ್ಟ ಆಸೆಯಿಂದ ಸಾವಂತ್ರಿಯ ಮನೆಗೆ ಬರುವ ಬಿಜ್ಜಳನಿಗೆ ನಿರಾಸೆ ಕಾದಿರುತ್ತದೆ. 'ಶಿವರಾತ್ರಿ'ಯಲ್ಲಿ ಕಾಯಕ ತತ್ವದಿಂದ ಸಮಾನತೆಯನ್ನು ಶೋಧಿಸಿದ ಹಾಗೆ ಕಾಮಕ್ಕೆ ಅನುಭವ ತತ್ವದ ಆಧಾರವಿದೆ ಎಂದರೆ ತಪ್ಪಾಗಲಾರದು. ಕಾಮ ಹಾಗೂ ಸಮಾನತೆಯ ಕಲ್ಪನೆಗಳು ಅನುಭವ ಹಾಗೂ ಕಾಯಕತತ್ವದಿಂದ ಮಾಗಿ ಅಂತರಂಗ ಬಹಿರಂಗಗಳೆರಡರಲ್ಲಿ ಮಹತ್ವದ ಮೌಲ್ಯದರ್ಶನ ಮೂಡಿಸುತ್ತದೆ. "ಸ್ವಚ್ಛಂದವಾಗಿ ದೇಹ ಮಾರುವುದಕ್ಕೆ ಬರುವವರಲ್ಲ ನಾವು"

ಎಂದು ಹೇಳುವ ಮೂಲಕ ಸಂಗಯ್ಯನ ಜೊತೆ ಕೂಡಿರುವ ಕಾಮಾಕ್ಷಿಯನ್ನು ಬಿಜ್ಜಳನಿಗೆ ಒಪ್ಪಿಗೆ ನೀಡಲು ನಿರಾಕರಿಸುತ್ತಾಳೆ. ಕಾಯಕದಿಂದಾಗಿಯೇ ಹಣ ಗಳಿಸಿ ಅದಕ್ಕೆ ತೆರಿಗೆಯನ್ನು ಕಟ್ಟುತ್ತಿರುವ ಸಾವಂತ್ರಿ ಬಿಜ್ಜಳನಿಗೆ ಯಾವ ರೀತಿಯಲ್ಲೂ ಹೆದರುವುದಿಲ್ಲ. ತಾನು ತಿನ್ನುತ್ತೇನೆ, ಮಧ್ಯದಲ್ಲಿ ರಾಜನಾದವನು ತನ್ನ ಸ್ವಾತಂತ್ರ್ಯವನ್ನು ಕಿತ್ತುಕೊಳ್ಳಲು ಸಾಧ್ಯವಿಲ್ಲ ಎಂಬಂತೆ ಸಮಾನತೆಯ ತತ್ವವನ್ನು ಪ್ರತಿಪಾದಿಸುತ್ತಾಳೆ.

ಕಾಮಾಕ್ಷಿಯೊಂದಿಗೆ ಲಿಂಗಪೂಜೆ ಆಚರಿಸಿಕೊಳ್ಳಲೆಂದು ಬರುವ ಸಂಗಯ್ಯ ಕಾಮಾಕ್ಷಿಯನ್ನು ತನ್ನ ಜೊತೆ ಕೂರಿಸಿಕೊಳ್ಳುತ್ತಾನೆ. ಸ್ತ್ರೀಗೆ ನೀಡಬೇಕಾಗಿರುವ ಸಮಾನತೆಯು ಈ ದೃಶ್ಯದ ಮೂಲಕ ವ್ಯಕ್ತವಾಗುತ್ತದೆ. ಕಾಮದಲ್ಲಿ ಸಮಾನತೆ ಕಾಪಾಡುವ ಎಲ್ಲರಂತಲ್ಲ ಈ ಸಂಗಯ್ಯ ಎಂಬುದನ್ನು ಅವನ ಲಿಂಗನಿಷ್ಠೆಯಿಂದ ತಿಳಿಯುತ್ತದೆ. ಕಾಮಕೇಳಿಯಲ್ಲಿ ಹೆಣ್ಣು-ಗಂಡು ಒಂದಾಗುವಂತೆ ತಾನು ಮಾಡುವ ಲಿಂಗಪೂಜೆಯಲ್ಲಿಯೂ ಕಾಮಾಕ್ಷಿಗೆ ಸಮಾನ ಸ್ಥಾನವನ್ನು ಸಂಗಯ್ಯ ನೀಡುತ್ತಾನೆ.

ಶಿವರಾತ್ರಿಯಲ್ಲಿ ಬರುವ ಕಾಶವ್ವ, ಸೂಳೆ ಸಾವಂತ್ರಿ, ಕಾಮಾಕ್ಷಿ ಈ ಪಾತ್ರಗಳೆಲ್ಲವೂ ಒಂದಲ್ಲಾ ಒಂದು ರೀತಿಯಲ್ಲಿ ಪುರುಷನ ಜೊತೆ ಸಮಾನತೆಯನ್ನು ಕಾಯ್ದುಕೊಳ್ಳುವಲ್ಲಿ ಯಶಸ್ವಿಯಾಗಿವೆ. ಮುದುಕಪ್ಪನ ಜೊತೆ ಸಂವಾದಿಸುವ ಕಾಶವ್ವ ತನ್ನ ನಿರ್ಧಾರವನ್ನು ತಾನೇ ತೆಗೆದುಕೊಳ್ಳುವವಳಾಗಿದ್ದಾಳೆ. ದಾಮೋದರ ಕದ್ದಿರುವ ಸರ ಸಿಕ್ಕಂತಹ ಸಂದರ್ಭದಲ್ಲಿ ಅದರ ಅವಶ್ಯಕತೆ ತನಗಿಲ್ಲ ಎಂಬುದನ್ನು

"ಎಷ್ಟಾದರೂ ಇರಲೋ ಯಪ್ಪ ನಮಗ ಬ್ಯಾಡ
ನಾವದನ್ನೇನೂ ಕಾಯಕ ಮಾಡಿ ಗಳಿಸಿಲ್ಲ
ನಮಗದರ ಗರ್ವಾ ಇಲ್ಲ, ನೀನ ತಗೊಂಡ್ಹೋಗು"

ಎಂದು ತಮಗೆ ನೀಡಿದಂತಹ ಹಾಗೂ ತಮ್ಮ ಮನೆಯಲ್ಲಿ ಹೆಗ್ಗಣ ಸತ್ತ ಹಾಗೆ ವಾಸನೆ ಹೊಡೆಯುತ್ತಿರುವ ಹಾರವನ್ನು ಕುರಿತು ಕಾಳವ್ವ ಈ ರೀತಿಯಾಗಿ ಹೇಳುತ್ತಾಳೆ, ತನಗಿಂತಲೂ ವಯಸ್ಸಿನಲ್ಲಿ ದೊಡ್ಡವನಾದ ಮುದುಕಪ್ಪ ಅಲ್ಲಿದ್ದರೂ ತಾನು ಸ್ವತಂತ್ರವಾಗಿ ನಿರ್ಧಾರವನ್ನು ತೆಗೆದುಕೊಳ್ಳುವುದರ ಮೂಲಕ ಹೆಣ್ಣು ಎಷ್ಟು ಸ್ವತಂತ್ರಳು ಎಂಬುದನ್ನು ಬಿಂಬಿಸುತ್ತಾಳೆ. ಬಿಜ್ಜಳನ ಜೊತೆ ವಾದಕ್ಕಿಳಿಯುವ ಸಾವಂತ್ರಿಯು ಬಿಜ್ಜಳನ ಹೇಳಿಕೆಗಳಿರಬಹುದು ಅವನ ಅಧಿಕಾರದ ಆಜ್ಞೆಗಳಿರಬಹುದು ಎಲ್ಲವನ್ನು ತಿರಸ್ಕರಿಸುತ್ತಾಳೆ. ಕಾಮಾಕ್ಷಿಯನ್ನು ಬಿಜ್ಜಳ ಕೇಳಿದಾಗ ತಂದು ನಿಲ್ಲಿಸಲು ನಿರಾಕರಿಸುತ್ತಾಳೆ. ಬಿಜ್ಜಳ ಬಸವನ ಬಗೆಗೆ ತಪ್ಪು ಅಭಿಪ್ರಾಯ ವ್ಯಕ್ತಪಡಿಸಿದಾಗ ನಿಜವೇನೆಂಬುದನ್ನು ತಿಳಿಯಲು ಪ್ರಯತ್ನಿಸುತ್ತಾಳೆ. ಸೂಳೆಗೆ ಯಾವ ವೃತ್ತಿಧರ್ಮ ಎಂದು ಬಿಜ್ಜಳ ಪ್ರಶ್ನಿಸಿದಾಗ ತಮ್ಮ ವೃತ್ತಿಧರ್ಮದ ಸಮರ್ಥನೆಯನ್ನು ಮಾಡಿಕೊಳ್ಳುವುದರ ಮೂಲಕ ಸಾವಂತ್ರಿಯು ನಾನು ಒಬ್ಬ ಪ್ರಜೆಯಾಗಿ ರಾಜ್ಯದ ವಿಷಯಗಳಲ್ಲಿ ತಲೆಹಾಕುವಂತಹ ಸಮಾನ ಹಕ್ಕನ್ನು ಪಡೆದವಳೆಂದು ಬಿಜ್ಜಳನಲ್ಲಿ ವಾದ ಮಾಡುತ್ತಾಳೆ.

ಬಿಜ್ಜಳನ ಮುಂದೆ ಸಮಾನತೆಯ ಹಕ್ಕನ್ನು ಪ್ರತಿಪಾದಿಸುವ ಸಾವಂತ್ರಿ ತಾನು ಪ್ರಜೆಯಾಗಿ ಕಟ್ಟಬೇಕಾದ ತೆರಿಗೆಯನ್ನು ಕಟ್ಟುತ್ತಿದ್ದೇನೆ. ತಾನು ರಾಜ್ಯದಲ್ಲಿ ಪಡೆಯಬೇಕಾಗಿರುವ ಸ್ಥಾನಮಾನವನ್ನು ಅಪೇಕ್ಷಿಸುತ್ತೇನೆ ಹಾಗೂ ತನ್ನನ್ನು ದಂಡಿಸುವ ಹಕ್ಕು ಬಿಜ್ಜಳನಿಗೆ ಇಲ್ಲ ಎಂಬಂತೆ ಅವನ ಆಜ್ಞೆಗಳನ್ನು ತಿರಸ್ಕರಿಸುತ್ತಾಳೆ. ಸಂಗಯ್ಯನ ಜೊತೆ ಲಿಂಗಪೂಜೆಯಲ್ಲಿ ಪಾಲ್ಗೊಳ್ಳುವ ಕಾಮಾಕ್ಷಿಯು "ಶರಣಸತಿ ಲಿಂಗಪತಿ" ಎಂಬ ತತ್ವಕ್ಕೆ ಒಳಪಟ್ಟಂತೆ ದೇವರಾದ ಸಂಗಯ್ಯನಿಗೆ ಪೀಠ ಸಲಕರಣೆಗಳನ್ನು

ಒದಗಿಸಿಕೊಡುವ ಭಕ್ತೆಯಾಗಿ ಕಾಣಿಸುತ್ತಾಳೆ. ಈ ತತ್ವದ ಮೂಲಕ ಗಂಡು ಮತ್ತು ಹೆಣ್ಣಿನಲ್ಲಿ ಕಾಮದಷ್ಟೇ ಪ್ರಮುಖವಾದದ್ದು ಸಮಾನತೆ ಎಂದು ಬಿಂಬಿಸುವ ಅಂಶಗಳು ಕಂಡುಬರುತ್ತವೆ.

ಕಲ್ಯಾಣದ ಕೆಳವರ್ಗದವರಿಗೆ ಸಮಾನತೆಯ ವ್ಯವಸ್ಥೆಯನ್ನು ಕಲ್ಪಿಸಬೇಕೆಂದು ಹೊರಟುನಿಂತ ಬಸವಣ್ಣ ಬಿಜ್ಜಳನಿಗೆ ಪ್ರಶ್ನಿಸುತ್ತಾಳೆ. ಅವರು ಮನುಷ್ಯರೆಂದು ಒಪ್ಪುವುದಕ್ಕೆ ಸಿದ್ಧರಿಲ್ಲ! ಅಂದ ಮೇಲೆ ನಾನೇನು ಹೇಳಲಿ? ಈ ರೀತಿ ಹೇಳುವುದರ ಮೂಲಕ ಸಮಾನತೆಯ ನೆಲೆಯನ್ನು ತಾವೆಲ್ಲಿ ಸೃಷ್ಟಿಸಿದ್ದೀರಿ ಎಂದು ಪ್ರಶ್ನಿಸುತ್ತಾನೆ. ಸಾಮಾನ್ಯನಿಗೂ ಸಮಾನತೆಗೂ ಅಂತರವನ್ನು ಏರ್ಪಡಿಸುವ ಬಿಜ್ಜಳನಿಗೆ ಸಮಾನತೆ ಎಂಬಂತಹ ಅರ್ಥವ್ಯಾಪ್ತಿಯನ್ನು ಬಸವ ತೋರಿಸಲೆತ್ನಿಸುತ್ತಾನೆ. ಮತ್ತೊಂದು ಕಡೆ ದೈವತ್ವದಲ್ಲೂ ಮಾನವರ ನೆಲೆಯನ್ನು ಕಾಣುವಂತೆ ತನ್ನ ಲಿಂಗದೀಕ್ಷೆಯಲ್ಲಿ ಅಳವಡಿಸಿಕೊಳ್ಳುವ ಸಂಗಯ್ಯ ಹಳೆ ಕಾಲದಿಂದಲೂ ಕಲ್ಯಾಣದ ನಗರ ದೇವತೆಯಾಗಿರುವ ಕಲ್ಯಾಣಿ(ಹುಚ್ಚಿ) ಅಲೌಕಿಕದಲ್ಲೂ ಸಮಾನತೆಯನ್ನು ಪ್ರತಿನಿಧಿಸುತ್ತಾಳೆ.

ಶಿವರಾತ್ರಿ ನಾಟಕದಲ್ಲಿ ಕಾಯಕನಿಷ್ಠೆಯ ತತ್ವವು ಬಹಳ ಮುಖ್ಯವಾಗಿ ಬರುತ್ತದೆ. ಬಿಜ್ಜಳನು ನನಗೆ ಕಾಮಾಕ್ಷಿಯು ಈಗಲೇಬೇಕು ಎಂದು ಆಜ್ಞೆ ನೀಡಿದಾಗಲೂ ಸೂಳೆ ಸಾವಂತ್ರಿಯು ರಾಜನ ಆಜ್ಞೆಯನ್ನು ತಿರಸ್ಕರಿಸುತ್ತಾಳೆ. ನಮಗೆ ವೃತ್ತಿಧರ್ಮವಿದೆ. ಅದನ್ನು ನಾವು ಮೀರುವುದಿಲ್ಲ ಎಂದು ಬಹಿರಂಗವಾಗಿಯೇ ಅದನ್ನು ಅಲ್ಲಗಳೆಯುತ್ತಾಳೆ. ನಾವು ಯಾರಿಗೂ ಮೋಸ ಮಾಡುವುದಿಲ್ಲ, ನಮಗೆ ಎಲ್ಲರೂ ಒಂದೇ. ನಮಗೆ ತೊಂದರೆಯಾಗಬಾರದೆಂದು ನಾವು ನಾಯಿಯನ್ನು ಸಾಕಿಲ್ಲ. ನಾವು ಮೊದಲು ಬಂದವರಿಗೆ ಆದ್ಯತೆ ನೀಡುತ್ತೇವೆ ಎಂದು ತನ್ನ ವೃತ್ತಿಧರ್ಮದ ನೀತಿಯನ್ನು ಹೇಳುತ್ತಾಳೆ. ನಮಗೂ ಇದು ಒಂದು ಕಾಯಕ. ಈ ಕಾಯಕವನ್ನು ನಾವು ನಿಷ್ಠೆಯಿಂದ ಮಾಡುತ್ತೇವೆ.

ಈ ಶಿವರಾತ್ರಿ ನಾಟಕವು ಹಿಂದಿನ ಲಂಕೇಶ್, ಕಾರ್ನಾಡರ ನಾಟಕಗಳ ಆಶಯಗಳಿಗಿಂತಲೂ ಈ ಶಿವರಾತ್ರಿ ಭಿನ್ನವಾಗುವುದು ಮತ್ತು ಹೆಚ್ಚು ವಾಸ್ತವಕ್ಕೆ ಹತ್ತಿರವಾಗಿ ಪ್ರಸ್ತುತಕ್ಕೆ ಹತ್ತಿರವಾಗುವುದು ಈ ಹಂತದಲ್ಲಿಯೇ ಎನ್ನಬಹುದು. ಬಸವಣ್ಣ ಹೊಲಗೇರಿಗೆ, ಸೂಳೆಮನೆಗೆ ಹೋಗುವುದು ಆತ ಎಲ್ಲಾ ಶರಣರನ್ನು ಸಮಾನವಾಗಿ ಕಂಡವನು ಎಂಬುದಕ್ಕೆ ಈ ಪ್ರಸಂಗ ಸಾಕ್ಷಿಯಾಗಿದೆ. ಅಷ್ಟೇ ಅಲ್ಲದೇ ಸಾವಂತ್ರಿ ಬರೀ ಸೂಳೆ ಅಲ್ಲ, ಆಕೆ ಶರಣೆ ಕೂಡ ತನ್ನ ಕಾಯಕವನ್ನು ನಿಷ್ಠೆಯಿಂದ ಮಾಡುತ್ತಾ ಆಕೆ ಅರಮನೆಯ ಬೊಕ್ಕಸಕ್ಕೆ ತೆರಿಗೆ ಕಟ್ಟುತ್ತಿರುವ ನಿಷ್ಠಾವಂತ ಶರಣೆ. ಆದರೆ 'ಮನುಸ್ಮೃತಿ' ಮತ್ತು 'ಯಜ್ಞವಲ್ಕ್ಯಸ್ಮೃತಿ' ಕೃತಿಗಳ ಕಾಲಕ್ಕೆ ಹೆಣ್ಣಿನ ಸ್ಥಾನಮಾನಗಳನ್ನು ಕಡೆಗಣಿಸಲಾಗಿತ್ತು. ಋಗ್ವೇದದಲ್ಲಿ ಮಾತ್ರ ಹೆಣ್ಣು ಮತ್ತು ಗಂಡನ್ನು ಧಾರ್ಮಿಕ ಸಂದರ್ಭಗಳಲ್ಲಿ ಸಮಾನವಾಗಿ ಕಾಣಲಾಗಿತ್ತು. ಮಧ್ಯಯುಗೀನ ಕಾಲಕ್ಕೆ ಹೆಣ್ಣನ್ನು ಉದಾರ ನಿಲುವಿನಿಂದ ನೋಡಲಾಗಿತ್ತು. ದೇವದಾಸಿಯರನ್ನು ಸಹ ಮಧ್ಯಯುಗಿನ ಸಂಸ್ಕೃತಿಯು ಉದಾರದಿಂದ ನೋಡಿತ್ತು. ಇಲ್ಲಿ ಸಾವಂತ್ರಿ ಮಧ್ಯಯುಗದ ಬಿಜ್ಜಳ ರಾಜನ ಸಂಪತ್ತು, ಐಶ್ವರ್ಯ ಮತ್ತು ಬಸವ, ಮುಗ್ಧ ಸಂಗಯ್ಯನ ಭಕ್ತಿ ಎರಡನ್ನು ಮೌಲ್ಯಮಾಪನ ಮಾಡುವ ಅಸಾಮಾನ್ಯ ಸ್ವಾತಂತ್ರ್ಯ ಪಡೆದಿದ್ದಾಳೆ. ಇಲ್ಲಿ ಹೆಣ್ಣಿಗೆ ಸಿಕ್ಕ ಸ್ವಾತಂತ್ರ್ಯ, ಸಮಾನತೆ ಭಕ್ತಿಯ ಪರಾಕಾಷ್ಠೆಗಳು ಎದ್ದು ಕಾಣುತ್ತವೆ.

"ನಾಟಕಕಾರರು ೧೨ನೇಯ ಶತಮಾನದ ಘಟನೆಗೆ ಸಮಕಾಲೀನತೆಯನ್ನು ತುಂಬಿರುವುದರಿಂದ ಈ ನಾಟಕ ನಮ್ಮ ಕಣ್ಮುಂದೆ ನಡೆದಂತೆ ಭಾಸವಾಗುತ್ತದೆ. ಹಿಂದಿನ 'ಸಂಕ್ರಾಂತಿ', 'ತಲೆದಂಡ', 'ಮಹಾಚೈತ್ರ' ನಾಟಕಗಳಿಗಿಂತ ಶಿವರಾತ್ರಿ ನಾಟಕದ ವಸ್ತು, ಭಾಷೆ, ಸಂವಿಧಾನದಲ್ಲಿ ಭಿನ್ನವಾಗಿದೆ. ಜೊತೆಗೆ ರಂಗಪಠ್ಯ

ಹಾಗೂ ರಂಗಭೂಮಿಯ ಎಲ್ಲಾ ಸಾಧ್ಯತೆಗಳನ್ನು ದುಡಿಸಿಕೊಂಡು ಕಟ್ಟಿರುವ ಇದರ ಬಂಧ ಮತ್ತು ಕೌಶಲ್ಯ ವಿಶಿಷ್ಟವಾದುದು. ಕಾವ್ಯದ ರೂಪಕದ ಭಾಷೆ ಮತ್ತು ನಾಟಕದ ಸಂಭಾಷಣಾ ಭಾಷೆಗಳೆರಡನ್ನು ಹೊರತೆಗೆದ ರಸಪಟ್ಟಿಯನ್ನು ಶಿವರಾತ್ರಿ ನಾಟಕದಲ್ಲಿ ಕಾಣುತ್ತೇವೆ".[9]

ಕಲ್ಯಾಣದ ಜೀವನ ಧರ್ಮವೇ ಕಾಯಕವೆಂದು ಅಂದಾಜಿಸಬಹುದು. ಇಡೀ ನಾಟಕವೇ 'ಕಾಯಕವೇ ಕೈಲಾಸ' ಎಂಬ ಸಿದ್ಧಾಂತದ ಮೇಲೆ ನಿಂತಿದೆ. ಕಲ್ಯಾಣದ ಹೊರಕೇರಿಯನ್ನು ಪ್ರವೇಶಿಸುತ್ತಿದ್ದಂತೆ ಅಲ್ಲೊಂದಷ್ಟು ಜನ ಕೂಡ ಹರಟುತ್ತಾರೆ. ಅಲ್ಲಿಗೆ ಗೊತ್ತಿಲ್ಲದ ಹಾಗೆ ಕಾಶವ್ವನ ಮನೆಯಲ್ಲಿ ಅವಿತು ಕುಳಿತು ಅಲ್ಲಿಯೇ ಚಿನ್ನದ ಸರವನ್ನು ಬಿಟ್ಟು ದಾಮೋದರ ಹೊರಗೆ ಬರುತ್ತಾನೆ. ಆ ಸರ ಹೆಗ್ಗಣ ಸತ್ತಾಗ ಬರುವ ವಾಸನೆಯನ್ನು ಕಾಶವ್ವನ ಮನೆಯಲ್ಲಿ ತರುತ್ತದೆ. ಸರವನ್ನು ಹೊರತಂದಾಗ ಅದನ್ನು ತೆಗೆದುಕೊಳ್ಳುವ ದಾಮೋದರ "ಇದರ ಕಿಮ್ಮತ್ತ ಎಷ್ಟು ಗೊತ್ತೈತೇನ" ಎಂದು ಕೇಳುತ್ತಾನೆ. ಅದಕ್ಕೆ ಉತ್ತರವಾಗಿ ಕಾಶವ್ವ "ಎಷ್ಟಾದರೂ ಇರಲೋ ಎಪ್ಪಾ, ನಮಗ ಬೇಡ ನಾನು ಅದನ್ನೇನು ಕಾಯಕ ಮಾಡಿಗಳಿಸಿಲ್ಲ" ಎಂದು ನುಡಿಯುವುದರೊಂದಿಗೆ ಕಾಯಕದ ಮಹತ್ವವನ್ನು ತಿಳಿಸುತ್ತಾರೆ. ಹಾಗೆಯೇ ಜೀವನದಲ್ಲಿ ಶಾಂತಿ, ನೆಮ್ಮದಿಗಳಿಸಲು ಕಾಯಕವೇ ದಾರಿ ಎಂಬುದನ್ನು ತಿಳಿದವರಾಗಿದ್ದಾರೆ. ಶಿವರಾತ್ರಿಯಲ್ಲಿ ಬರುವ ಸೂಳೆ ಸಾವಂತ್ರಿಯ ಪಾತ್ರ ಇನ್ನಿಲ್ಲದ ವಿಚಾರಗಳನ್ನು ಕಾಯಕದ ಬಗೆಗೆ ತಿಳಿಸುತ್ತದೆ. ಸೂಳೆ ಸಾವಂತ್ರಿಯು ತನ್ನ ವೃತ್ತಿಯೇ ತನ್ನ ಜೀವನ ಧರ್ಮವೆಂದು ತಿಳಿದಿರುವಳು. ತನ್ನ ವೃತ್ತಿಯಿಂದ ಯಾರಿಗೂ ಅನ್ಯಾಯವಾಗದ ಹಾಗೆ ವೃತ್ತಿಧರ್ಮವನ್ನು ಪಾಲಿಸುವಳು. ತನ್ನ ಕಾಯಕದಿಂದ ತಾನು ಗಳಿಸುವ ಹಣದಲ್ಲಿ ರಾಜ್ಯಕ್ಕೆ ತೆರಿಗೆಯನ್ನು ಕಟ್ಟುತ್ತಾಳೆ. ತಾನು ತೆರಿಗೆಯನ್ನು ಕಟ್ಟುವುದರಿಂದ ರಾಜ್ಯದ ರಾಜ ಬಿಜ್ಜಳನಿಗೂ ಹೆದರುವ ಆಗಿಲ್ಲ ಎಂದು ತಿಳಿದಿರುವ ಹೆಣ್ಣು ಸಾವಂತ್ರಿ ಬಿಜ್ಜಳನ ವರ್ತನೆಗೆ ಭಯವಿಲ್ಲದೇ ತಾನು ತನ್ನ ವೃತ್ತಿಧರ್ಮವನ್ನು ಪಾಲಿಸುವಳು. ನೀನು ಬಂದಿರೆಂದು ನೀನು ನನ್ನ ಕಾಯಕ ಧರ್ಮಕ್ಕೆ ಅಪಚಾರವೆಸಗುವುದಿಲ್ಲ ಎಂದು ವಾದಿಸುತ್ತಾಳೆ.

'ಸಂಕ್ರಾಂತಿ'ಯ ನಾಟಕದ ವೈಶಿಷ್ಟ್ಯತೆಯನ್ನು ನೋಡುವುದಾದರೆ ಪಿ.ಲಂಕೇಶರು ಸೃಜನಶೀಲ ನಾಟಕಕಾರರಲ್ಲಿ ಒಬ್ಬರಾಗಿದ್ದು, ಇವರ ಚಿಂತನೆಗಳು ಸ್ವಲ್ಪ ಭಿನ್ನವಾಗಿ ತೋರುತ್ತದೆ. ಅವರ ಆಲೋಚನಾಕ್ರಮವೇ ಭಿನ್ನವಾಗಿರುತ್ತದೆ. ಅವರ ನಾಟಕವು ಬಸವಣ್ಣನ ಶರಣತತ್ವವನ್ನೇ ವಿರೋಧಿಸಿ ನಿಲ್ಲುವಂತಹ ಕಥಾಹಂದರವನ್ನು ಈ ನಾಟಕ ಹೊಂದಿದೆ. ಸಮಾಜ ಸುಧಾರಣೆ ಮಾಡುವಲ್ಲಿ ಬಸವಣ್ಣ ಎಡವಿದಂತೆ ಕಾಣುತ್ತದೆ. ಲಂಕೇಶರು ಬಸವಣ್ಣನನ್ನು ವಿಶೇಷ ನೆಲೆಯಲ್ಲಿ ನೋಡಿದ್ದಾರೆ. ವ್ಯವಸ್ಥೆಯ ಒಳಗೆ ತಮ್ಮತನವನ್ನು ಬಿಟ್ಟುಕೊಡಲಾಗದ ದಲಿತರು ಬಸವನಿಂದ ಕಂಗಾಲಾಗುತ್ತಾರೆ. ಹೆಣ್ಣು-ಹೆಂಡದ ಜೊತೆಯಲ್ಲಿ ಬಸವಣ್ಣನ ಶರಣತತ್ವವನ್ನು ಪಾಲಿಸಲು ವ್ಯವಸ್ಥೆಯ ಹಿತ ಕಾಪಾಡಲು ಬಿಜ್ಜಳ ಶರಣ, ಬ್ರಾಹ್ಮಣನೆನ್ನದೇ ಎಲ್ಲರ ತಲೆದಂಡ ಕೊಡಲು ನಿರ್ಧಾರ ತೆಗೆದುಕೊಳ್ಳುತ್ತಾನೆ. ಈ ಎಲ್ಲದರ ಮಧ್ಯೆ ಬಸವನನ್ನು ಅಸಹಾಯಕನಾಗಿ ತೋರಿಸಿದ್ದಾರೆ.

ಉಜ್ಜನ ಗ್ರಹಿಕೆಯಲ್ಲಿ ಮನುಷ್ಯ ಅಂದ ಮೇಲೆ ಹೆಂಡ ಕುಡಿಯಬೇಕು, ಖಂಡ ಕಡೀಬೇಕು, ಹೆಣ್ಣಿನ ಸಹವಾಸ ಮಾಡಬೇಕು. ಇದೆಲ್ಲಾ ಇಲ್ಲದವನು ಮನುಷ್ಯನೇ ಅಲ್ಲ ಎನ್ನುವ ತಿಳುವಳಿಕೆಯನ್ನು ಹೊಂದಿರುವ ಅವನು ನಾಟಕದಲ್ಲಿ ವಿಶೇಷವಾಗಿ ಕಾಣುತ್ತಾನೆ. ಬ್ರಾಹ್ಮಣ ಸ್ತ್ರೀಯರಿಗೆ ದಲಿತನ ಒರಟುತನ ಇಷ್ಟ ಎಂಬ ಮಾತು ನಾಟಕದಲ್ಲಿ ಕಾಣುತ್ತದೆ. ರುದ್ರನನ್ನು ಮನಸಾರೆ ಇಷ್ಟಪಡುವ ಉಷಾ ರುದ್ರನ ಮೂಲಗುಣಕ್ಕೆ ಮನಸೋತಿದ್ದಾಳೆ. ರುದ್ರನಲ್ಲಿ ಒರಟುತನವನ್ನು ಸದಾ ಕಾಣಲಿಚ್ಛಿಸಿ ಅವನಲ್ಲಿ ಬಸವನ

ತತ್ವವನ್ನು ಅಳಿಸಲು ಹವಣಿಸುತ್ತಾಳೆ. ಉಷಾಳಿಗೆ ದಲಿತ ರುದ್ರ ಬೇಕೆ ಹೊರತು ಶರಣ ರುದ್ರ ಅಲ್ಲ. ರುದ್ರನಲ್ಲಿರುವ ದಲಿತತನವನ್ನು ಹೊರಗೆ ತಂದು ಅವನ ಜೊತೆ ಸಂಭೋಗಿಸುತ್ತಾಳೆ. ಹುಟ್ಟಿನಿಂದ ಇರುವ ಬ್ರಾಹ್ಮಣತ್ವವನ್ನು ತೊರೆದು ದಲಿತತ್ವದ ಕಡೆಗೆ ಹೊರಳುವ ಉಷಾ ನಾಟಕದ ನಿರ್ಣಾಯಕ ಪಾತ್ರವಾಗಿ ಕಾಣುತ್ತಾಳೆ.

ಉಜ್ಜನ ಗಾದೆಮಾತು ನಾಟಕದಲ್ಲಿ ಸತ್ಯವಾಗುತ್ತದೆ. "ಹೊಲೇರ ಕೈಗೆ ಮೈ ಕೊಡಬೇಡ, ಬ್ರಾಂಬ್ರ ಕೈಗೆ ಮನಸ ಕೊಡಬೇಡ" ರುದ್ರನಂತ ಹೊಲೆಯ ತನ್ನ ಶಕ್ತಿಯುತ ಕೈಗಳಲ್ಲಿ ಉಷಾಳನ್ನು ಬಳಸಿ ಅವಳ ಜೊತೆ ಸಂಭೋಗಿಸಿದಾಗ ಉಷಾ ಸಂಪೂರ್ಣ ಅವನ ಪಾಲಾಗಿ ಹೋಗುತ್ತಾಳೆ. ತನ್ನತನ, ತನ್ನ ಮನೆಯವರನ್ನು ಬಿಟ್ಟು ಉಷಾ ಹೊಲೆಯನ ಜೊತೆ ಹೊಲತಿಯಾಗುತ್ತಾಳೆ. ಉಷಾಳಿಗೆ ಮನಸ್ಸು ಕೊಟ್ಟ ರುದ್ರ ತಾನು ಬ್ರಾಹ್ಮಣನಾಗುವ ನಿಟ್ಟಿನಲ್ಲಿ ಸಾಗುತ್ತಾನೆ. ರುದ್ರ ಶರಣನಾಗುವುದನ್ನು ವಿರೋಧಿಸುವ ಉಷಾ ಕೊನೆಯಲ್ಲಿ ನನ್ನನ್ನು ಅತ್ಯಾಚಾರ ಮಾಡಿದವನು ರುದ್ರ ಎಂದು ಹೇಳುತ್ತಾಳೆ. ತಾನು ಬಯಸಿದ ಒರಟು ರುದ್ರ ಇವನಲ್ಲ, ಇವನು ಶರಣ ರುದ್ರ ಎಂದು ಹೇಳಿ ಅವನ ಮೇಲೆ ಆಪಾದನೆ ಮಾಡುತ್ತಾಳೆ. ಅರ್ಥಾತ್, ಇಡೀ ನಾಟಕದ ಕೂಗು ಅಥವಾ ಧ್ವನಿಯೆಂದರೆ, ಶರಣ ಚಳುವಳಿಯ ಸೋಲಿನ ಅನೇಕ ಕಾರಣಗಳಲ್ಲಿ ಒಂದು. ಶರಣ ಚಳುವಳಿ ಅನಿವಾರ್ಯವಾಗಿ ಒಪ್ಪಿಕೊಂಡ ಈ ಬಗೆಯ ಸಂಸ್ಕೃತೀಕರಣ ಉಷಾಳಿಗೆ ಮನಸ್ಸು ಕೊಟ್ಟ ಅವನು ತನ್ನನ್ನು ತಲೆದಂಡಕ್ಕೆ ಅರ್ಪಿಸಿಕೊಳ್ಳುತ್ತಾನೆ.

ಈ ನಾಟಕದಲ್ಲಿ ಬಸವ ಇಡೀ ದಲಿತರ ಕುಲವನ್ನು ಶರಣರನ್ನಾಗಿಸಿ ಕಲ್ಯಾಣವನ್ನು ಶರಣರಿಂದ ಪಾವನಗೊಳಿಸಬೇಕೆಂದು ಚಿಂತಿಸುತ್ತಾನೆ. ಬಸವನ ತತ್ವಗಳನ್ನು ದಲಿತರು ಮೊದಲಿಗೆ ಒಪ್ಪಿಕೊಳ್ಳುತ್ತಾರೆ. ಆದರೆ ತಮ್ಮತನವನ್ನು ಬಿಟ್ಟುಕೊಡಲು ಸಾಧ್ಯವಾಗದ ಕಾರಣ ದಲಿತರು ನೀರಿನಿಂದ ಹೊರಬಿದ್ದಂತಹ ಮೀನಿನ ಹಾಗೆ ಒದ್ದಾಡುತ್ತಾರೆ. ಹೊಲೆಯನಾಗಿ ಶರಣತತ್ವವನ್ನು ಪಾಲಿಸಲಾಗುವುದಿಲ್ಲವೇ ಎಂಬ ಆಲೋಚನೆಯು ಅವರಲ್ಲಿ ಹುಟ್ಟದೇ ಇರುವುದಿಲ್ಲ. ಇಡೀ ದಲಿತರ ಸಾಂಕೇತಿಕವಾಗಿ 'ಉಜ್ಜ'ನ ಪಾತ್ರ ಸಿಗುತ್ತದೆ. ರುದ್ರನ ಒತ್ತಾಯಕ್ಕೆ ಶರಣನಾಗುವ ಉಜ್ಜ ದಲಿತನಾಗಿ ಹೆಂಡವನ್ನು ಕುಡಿಯುತ್ತಾನೆ, ಖಂಡವನ್ನು ತಿನ್ನುತ್ತಾನೆ. ತನ್ನ ಮಗ ರುದ್ರ ಒಳಿತಿಗಾಗಿ ನಾಟಕವಾಡತೊಡಗುತ್ತಾನೆ. ದೈಹಿಕವಾಗಿ ಶರಣರಾಗುವ ಶೂದ್ರರು ಮಾನಸಿಕವಾಗಿ ಪಕ್ವವಾಗಿಲ್ಲ ಎಂಬ ಅಂಶ ಗೋಚರಿಸುತ್ತದೆ. ಉಜ್ಜ ಮೌನ ಪ್ರತಿಭಟನೆ ನಡೆಸುವ ಮೂಲಕ ವಿಶೇಷ ವ್ಯಕ್ತಪಡಿಸುತ್ತಾನೆ. ಸುಖದಿಂದಿದ್ದೇನೆಂದು ಶರಣತತ್ವಕ್ಕೆ ತನ್ನ ಪ್ರತಿಭಟನೆ ಇದೆ ಎಂದು ನಿಲ್ಲುತ್ತಾನೆ. ಮತ್ತೊಂದು ಕಡೆ ಶರಣನೂ ಆಗದೇ, ಶೂದ್ರನೂ ಆಗದೇ ಮಧ್ಯದಲ್ಲಿ ತಾಕಾಡುವ ರುದ್ರ ಕೆಲವು ಬಾರಿ ಶರಣ, ಕೆಲವು ಬಾರಿ ಶೂದ್ರನಾಗಿಯೇ ನಾಟಕದಲ್ಲಿ ಕಾಣಸಿಗುತ್ತಾನೆ. ಉಷಾ ಜೊತೆಯಲ್ಲಿರುವ ರುದ್ರ ಶೂದ್ರನಾದರೆ, ಉಜ್ಜ ಮತ್ತು ಬಸವಣ್ಣನ ಬಳಿಯಲ್ಲಿ ಶರಣನಾಗುತ್ತಾನೆ. 'ಕೊನೆಯಲ್ಲಿ ನನಗೆ ಏನೂ ತಿಳಿದಿಲ್ಲ' ಎಂದು ಹೇಳುವುದರ ಮೂಲಕ ತಾನು ಪಾಲಿಸುತ್ತಿದ್ದ ಧರ್ಮ ಯಾವುದೆಂಬ ಪ್ರಶ್ನೆಯಲ್ಲಿಯೇ ರುದ್ರ ನಿಲ್ಲುತ್ತಾನೆ. ಸರಳ ಪ್ರೇಮದ ಪ್ರಕರಣವೊಂದು ವ್ಯವಸ್ಥೆಯ ದಿಕ್ಕುಗಳನ್ನು ಬದಲಿಸಲು ಸಾಧ್ಯವೆಂಬುದು ಇಲ್ಲಿ ಗೋಚರಿಸುತ್ತದೆ. ಹುಡುಗ–ಹುಡುಗಿಯ ಪ್ರೇಮಕ್ಕೆ ಅತ್ಯಾಚಾರವೆಂಬ ಪಟ್ಟ ಬಂದು ವ್ಯವಸ್ಥೆ ನಿರಪರಾಧಿಯ ತಲೆದಂಡವನ್ನು ಕೇಳುತ್ತದೆ. ಹೊಸ ವ್ಯವಸ್ಥೆಯ ಮೇಲೆ ಹಳೆಯ ವ್ಯವಸ್ಥೆ ಸವಾರಿ ಮಾಡಿರುವುದನ್ನು ಗಮನಿಸಬಹುದು. ನಾಟಕವು ಎಲ್ಲಾ ದೃಷ್ಟಿಕೋನಗಳಿಂದಲೂ ತನ್ನ ಆಶಯವನ್ನು ವ್ಯಕ್ತಪಡಿಸುವಲ್ಲಿ ಯಶಸ್ವಿಯಾಗಿದೆ.

ಮತ್ತೊಂದು ವಿಶೇಷವೆಂದರೆ ಚರಿತ್ರೆಯಾಗಲೀ, ಬಸವಣ್ಣನ ವೈಭವೀಕರಣವಾಗಲೀ ಬಿಜ್ಜಳನ ರಾಜಕೀಯವಾಗಲೀ ಇಲ್ಲಿ ಮುಖ್ಯವಾಗದೇ ಮೊದಲ ಬಾರಿಗೆಯೆಂಬಂತೆ ಪ್ರೇಮ ಪ್ರಸಂಗವೊಂದರ ಮೂಲಕ ಜಾತಿ-ಸಮಾಜ-ವ್ಯಕ್ತಿಗಳ ನಡುವಿನ ಸ್ವಭಾವ, ವರ್ತನೆಗಳನ್ನು, ಸ್ಥಿತಿಗಳನ್ನು ಲಂಕೇಶ ಇಲ್ಲಿ ಗ್ರಹಿಸಲು ಯತ್ನಿಸಿದ್ದಾರೆ.

'ತಲೆದಂಡ' ನಾಟಕದಲ್ಲಿ ನಾಟಕದ ಹೆಸರೇ ಸೂಚಿಸುವಂತೆ 'ತಲೆದಂಡ' ಎನ್ನುವುದು ಬಿಜ್ಜಳನ ತಲೆದಂಡ ಹಾಗೂ ಶರಣರ ತಲೆದಂಡವೂ ಕೂಡ ಹೌದು. ಒಂದು ರೀತಿಯಲ್ಲಿ ಹಲವಾರು ದ್ವಂದ್ವಗಳ, ಹಲವಾರು ಸಂಘರ್ಷಗಳ ಕತೆಯಾಗಿಯೇ ತಲೆದಂಡ ನಾಟಕ ಮುಂದುವರೆಯುತ್ತದೆ. ಬಸವ-ಜಗದೇವನ, ಬಸವ-ಬಿಜ್ಜಳನ, ಬಸವ-ಶರಣರ, ಬಿಜ್ಜಳ-ಸೋವಿದೇವನ ಹೀಗೆ ಪಾತ್ರ--ಪಾತ್ರಗಳ ನಡುವೆ ಇರುವ ಸಂಘರ್ಷವನ್ನು ನಾಟಕ ಬಹಳ ನಾಜೂಕಾಗಿ ಮುಂದುವರಿಯುತ್ತದೆ.

ಬಸವಣ್ಣ ಇಲ್ಲದ ಸಮಯದಲ್ಲಿ ಭಂಡಾರವನ್ನು ರಕ್ಷಿಸುವ ಜಗದೇವ ತಾನು ಬಸವನ ಹಾಗೆ ಪ್ರಸಿದ್ಧಿ ಪಡೆಯುತ್ತೇನೆಂದು ಭಾವಿಸುತ್ತಾನೆ. ಆದರೆ ೧೧ದಿವಸಗಳ ಕಾಲ ತನ್ನ ತಂದೆಯ ಶ್ರಾದ್ಧ ಕಾರ್ಯದಲ್ಲಿ ತೊಡಗುವ ಜಗದೇವನಿಗೆ ಬಸವಣ್ಣನ ಪವಾಡ ತಿಳಿಯುವುದೇ ಇಲ್ಲ. ಕಲ್ಯಾಣದಲ್ಲಿ ಇರುವನೊಬ್ಬನೇ ಬಸವ. ಅವನನ್ನು ಮೀರಲು ಯಾರಿಂದಲೂ ಸಾಧ್ಯವಿಲ್ಲವೆಂಬಂತೆ ಈ ಜಗದೇವನ ರೋಧನ ಅರಣ್ಯ ರೋಧನವಾಗುತ್ತದೆ. ತತ್ವಗಳಲ್ಲಿ ಬಸವಣ್ಣನ ಜೊತೆಯಲ್ಲಿ ಚರ್ಚಿಸುತ್ತಲೆ ಇರುವ ಜಗದೇವ ಕೊನೆಗೊಮ್ಮೆ ಬಸವಣ್ಣನನ್ನು ತೊರೆದು ಬಿಜ್ಜಳನ ಕೊಲೆಗೈಯಲು ಸಿದ್ಧನಾಗುತ್ತಾನೆ. ಜಗದೇವನಿಗೆ ಬಸವನ ಮೇಲೆ ಒಲವಿರುತ್ತದೆ. ಆದರೆ ಬಸವನ ವಿಚಾರಗಳು ಜಗದೇವನನ್ನು ಮುಟ್ಟಿರುವುದೇ ಕಡಿಮೆ. ಈ ನಾಟಕ ವಿಶೇಷವೆಂದರೆ ಬಿಜ್ಜಳ ಮತ್ತು ಬಸವಣ್ಣನನ್ನು ಸಾಮಾನ್ಯ ವ್ಯಕ್ತಿಗಳಂತೆ ತೋರಿಸುತ್ತದೆ. ಬಸವನ ದೃಷ್ಟಿಯಲ್ಲಿ ತಾನು ಸಾಮಾನ್ಯನೆಂಬ ಭಾವನೆ ಇದ್ದೇ ಇರುತ್ತದೆ. ಆದರೆ ಬಸವನ ನಿಷ್ಠೆ ಶರಣರಲ್ಲಿ ಬಸವನ ಬಗೆಗೆ ಒಂದು ರೀತಿಯ ಪವಾಡ ಪುರುಷನ ಪ್ರತಿಮೆಯನ್ನು ಹುಟ್ಟುಹಾಕಲು ಅನುವಾಗುತ್ತದೆ.

ಈ ನಾಟಕದ ಮತ್ತೊಂದು ವಿಶೇಷವೆಂದರೆ ಬಸವನ ತತ್ವ ಮತ್ತು ಬಿಜ್ಜಳ ನೀತಿ ಸಂಘರ್ಷಕ್ಕೆ ಎಡೆಯಾಗುತ್ತದೆ. ಬಿಜ್ಜಳನಿಗೆ ತನ್ನ ಸಿಂಹಾಸನ ಉಳಿಯುವುದು ಮುಖ್ಯ. ಅದಕ್ಕಾಗಿ ತಾನು ಏನನ್ನಾದರೂ ಮಾಡಬಲ್ಲ. ಆದರೆ ಬಸವನ ಮಿತ್ರತ್ವವನ್ನು ಆತ ಬಿಡಲಾರ. ಬಿಜ್ಜಳನ ದೃಷ್ಟಿಯಲ್ಲಿ ಬಸವ ಪವಾಡ ಪುರುಷನಂತೆ ಕಾಣುತ್ತಾನೆ. ಸರ್ವೆ ಸಾಮಾನ್ಯವಾದ ಕಲ್ಯಾಣ ಇಂದು ಮಹಾನಗರವಾಗಿ ಬೆಳೆಯಲು ಕಾರಣ ಬಸವ ಎಂದು ಬಿಜ್ಜಳ ತಿಳಿದಿದ್ದಾನೆ. ಇದೆಲ್ಲವೂ ಸಾಮಾನ್ಯನಿಂದ ನಡೆಯೋ ಮಾತಲ್ಲ ಎಂಬುದು ಬಿಜ್ಜಳನ ವಾದ. ಸಾಮಾನ್ಯ ತತ್ವಗಳಿಗೆ ಜೋತು ಬಿದ್ದಿರುವಾತ ಬಸವ. ತಾನು ಶರಣನಾಗಿ ಸಮಾಜವನ್ನು ಸರಿದಾರಿಗೆ ಕೊಂಡೊಯ್ಯಬೇಕಾಗಿರುವುದು ಸರಿಯಷ್ಟೇ. ಹಾಗೆಯೇ ಭಂಡಾರಿಯಾಗಿ ರಾಜ್ಯದ ಅಭಿವೃದ್ಧಿಯನ್ನು ಮಾಡಿದ್ದೇನೆ ಎನ್ನುತ್ತಾನೆ. ಬಸವನ ದೃಷ್ಟಿಯಲ್ಲಿ ರಾಜ ಪ್ರಜೆಯ ಸೇವಕ, ಪ್ರಜೆಗಳದೇ ಭಂಡಾರ. ಈ ಭಂಡಾರವನ್ನು ಪ್ರಜೆಗಳಿಗೆ ಉಪಯೋಗಿಸುವುದರಲ್ಲಿ ತಪ್ಪಿಲ್ಲವೆಂಬುದೇ ಬಸವನ ಭಾವನೆ.

ಈ ನಾಟಕದಲ್ಲಿ ಬಸವಣ್ಣ ಇನ್ನುಳಿದ ನಾಟಕಗಳಿಗಿಂತ ವಿಶೇಷವಾಗಿ ಕಾಣಿಸುತ್ತಾನೆ. ಶೀಲವಂತ ಮತ್ತು ಕಲಾವತಿಯ ವರ್ಣಸಂಕರದ ಮದುವೆಯ ಪ್ರಸ್ತಾಪ ಬಸವನಿಗೆ ನುಂಗಲಾರದ ತುತ್ತಾಗುತ್ತದೆ. "ನೂತನ ಧಾರ್ಮಿಕ-ಸಾಮಾಜಿಕ ಚಳುವಳಿಯು ಅದರ ಅನುಯಾಯಿಗಳು ತಮ್ಮ ನಾಯಕನ

ನಿಯಂತ್ರಣವನ್ನು ಮೀರಿ ತಾವೇ ನಿರ್ಣಾಯಕ ಅಧಿಕಾರವನ್ನು ಪಡೆಯುವ ಬಗೆಯನ್ನು ಈ ನಾಟಕವು ಶೀಲ–ಕಲಾವತಿಯರ ಪ್ರತಿಲೋಮ ವಿವಾಹದ ಸಂದರ್ಭದಲ್ಲಿ ನಮಗೆ ದರ್ಶಿಸುತ್ತದೆ". ತಾನು ಬದಲಾಯಿಸಬೇಕಾಗಿರುವ ಸಮಾಜ ತನಗಿಂತಲೂ ಮೊದಲೇ ಬದಲಾವಣೆಯ ಹಾದಿ ಹಿಡಿದಿರುವುದು ಮುಂದೆ ನಡೆಯುವ ಅನಾಹುತಕ್ಕೆ ನಾಂದಿಯಾಗುತ್ತದೆ ಎಂಬ ಅರಿವು ಬಸವಣ್ಣನನ್ನು ಕಾಡತೊಡಗುತ್ತದೆ. ಕಾಲ ಘಟನೆಗಳನ್ನು ಜೀರ್ಣಿಸಿಕೊಳ್ಳಲು ಆಗ ಮಾತ್ರವೇ ಸಮಾಜ ಶಾಂತವಾಗಿರಲು ಸಾಧ್ಯ. ಕಾಲಕ್ಕೆ ಅಜೀರ್ಣವಾದರೆ ಇಡೀ ಸಮಾಜ ರಾಡಿಯಾಗುತ್ತದೆ. ಅಂತಹ ಅವಕಾಶಕ್ಕೆ ಕಾದು ಕುಳಿತಿರುವವರು ಸಮಾಜದ ದಿಕ್ಕನ್ನೇ ಬದಲಿಸುತ್ತಾರೆ ಎಂಬುದು ಬಸವನಿಗೆ ತಿಳಿದಿರುವ ವಿಚಾರ. ಆದ್ದರಿಂದ ಶೀಲವಂತ ಮತ್ತು ಕಲ್ಯಾಣಿಯ ಮದುವೆಗೆ ಮೊದಲು ಸಂತೋಷಗೊಂಡರೂ ನಂತರ ತಡಮಾಡಿ ಅವರ ಮದುವೆಗೆ ಸಮ್ಮತಿ ನೀಡುತ್ತಾನೆ. ಏಕೆಂದರೆ ತಾನು ರೂಪಿಸಿದ ತತ್ವಗಳನ್ನು ತಾನೇ ವಿರೋಧಿಸಿದರೆ ಶರಣರು ತನ್ನ ತತ್ವಗಳಲ್ಲಿ ವಿಶ್ವಾಸ ಕಳೆದುಕೊಳ್ಳುತ್ತಾರೆ ಎಂಬ ಭಯ ಬಸವನನ್ನು ಕಾಡುತ್ತದೆ. ಮುಂದೆ ಬಂದೊದಗುವ ಯಾವ ಘಟನೆಗಳ ಅರಿವು ಇಲ್ಲದವರಂತೆ ಮಧುವರಸ ಮತ್ತು ಹರಳಯ್ಯ, ಶೀಲವಂತ ಮತ್ತು ಕಲ್ಯಾಣಿಯ ಮದುವೆ ಮಾಡಿಸಲು ಮುಂದಾಗುತ್ತಾರೆ. ಈ ನಾಟಕದಲ್ಲಿ ಮತ್ತೊಂದು ವಿಶೇಷವೆಂದರೆ ಗಂಡು–ಹೆಣ್ಣುಗಳ ಸಮ್ಮತಿಯು ಮುಖ್ಯವಾಗುವುದಿಲ್ಲ ಬದಲಿಗೆ ತಂದೆಯರ ನಿಲುವು ಮಾತ್ರವೇ ಮುಖ್ಯವಾಗುತ್ತದೆ.

ಈ ನಾಟಕದಲ್ಲಿ ಬಿಜ್ಜಳನು ಬಸವಣ್ಣನನ್ನು ನೋಡಿದ ರೀತಿ ವಿಶೇಷವಾಗಿದೆ. ಬಿಜ್ಜಳನಿಗೆ ತಿಳಿದ ವಿಚಾರವೆಂದರೆ ಬಸವನಿದ್ದರೆ ಕಲ್ಯಾಣ ಜೀವಂತ. ಬಸವನಿಲ್ಲದಿದ್ದರೆ ಕಲ್ಯಾಣ ಸ್ಮಶಾನ ಬಸವನನ್ನು ಸಂಪೂರ್ಣ ನಂಬಿರುವ ಬಿಜ್ಜಳ ಬಸವನ ತತ್ವಗಳಿಗೆ ಶರಣನಾಗಿದ್ದಾನೆ. ಬಸವನಿಂದ ಕಲ್ಯಾಣ ಸಮೃದ್ಧಿಯಿಂದ ಇದೆ ಎಂದು ನಂಬಿದ್ದಾನೆ. ಕಲ್ಯಾಣ ಸಂವೃದ್ಧವಾಗಿರಲು ತನ್ನದೇ ವಿಚಾರಧಾರೆಗಳನ್ನು ವ್ಯಕ್ತಪಡಿಸುವ ಬಿಜ್ಜಳ ಕಾಯಕತತ್ವವನ್ನು ನಂಬಿರುವ ಜನರಿಂದಲೇ ಈ ಕಲ್ಯಾಣ ಇಂದು ಪ್ರಕಾಶಿಸುತ್ತಿದೆ. ಇದಕ್ಕೆಲ್ಲಾ ಬಸವನ ಪವಾಡವೇ ಕಾರಣವೆಂದು ಸೂಚಿಸುತ್ತಾನೆ. ಇತರರು ನೋಡಿರುವ ನಾಟಕಕಾರರಿಗಿಂತ ಗಿರೀಶ್ ಕಾರ್ನಾಡರು ಬಸವಣ್ಣನನ್ನು ಮತ್ತು ಬಿಜ್ಜಳನನ್ನು ನೋಡಿರುವ ಬಗೆ ಬಹಳ ವಿಶೇಷವಾಗಿದೆ. ಈ ನಾಟಕದಲ್ಲಿ ಬಸವನ ತತ್ವ ಮುಖ್ಯವಾಗುತ್ತದೆಯೇ ಹೊರತು ಬಸವ ಮುಖ್ಯವಾಗುವುದಿಲ್ಲ. ಶರಣರೆಲ್ಲರೂ ಬಸವನ ತತ್ವ ಪಾಲಿಸಲಾಗಿ ಬಸವನ ಹಿಂಬಾಲಕರಾಗಿ ಬರಲು ನಿರಾಕರಿಸಿದಂತಹ ಪರಿಸ್ಥಿತಿ ಕಾಣುತ್ತೇವೆ.

'ಮಹಾಚೈತ್ರ' ನಾಟಕವು ಬಸವಣ್ಣನ ಅನುಪಸ್ಥಿತಿಯಲ್ಲಿ ನಡೆಯುವ ನಾಟಕ ಬಸವಣ್ಣನ ಸುತ್ತಲೇ ತಿರುಗುತ್ತದೆ. ಎಚ್.ಎಸ್.ಶಿವಪ್ರಕಾಶರು ಬಸವಣ್ಣನನ್ನು ನಾಟಕದಲ್ಲಿ ಬರದೇ ಆತನ ವಿಚಾರಧಾರೆಗಳು ತಂದಿದ್ದಾರೆ. ಬಸವನ ವಿಚಾರಧಾರೆಗಳಿಂದ ಉಜ್ವಲಿಸಿದ ಕಲ್ಯಾಣ ಅವನ ನಂತರ ಭೀಕರ ಪ್ರಳಯವಾಗಿ ಪ್ರಜ್ವಲಿಸುತ್ತದೆ. ಬಸವಣ್ಣನ ಚಳುವಳಿ ಸೋಲು ಮತ್ತು ಗೆಲುವು ಎರಡನ್ನೂ ಪಡೆದಂತೆ ಈ ನಾಟಕ ವ್ಯಕ್ತವಾಗುತ್ತದೆ. ಮಹಾಚೈತ್ರದಲ್ಲಿ ಬಸವಣ್ಣನಿಲ್ಲ, ಆದರೆ ಬಸವನ ಅನುಯಾಯಿಗಳಾಗಿದ್ದಾರೆ.

ನಾಟಕವನ್ನು ರೂಪಿಸಿರುವ ಅವರ ವೈಚಾರಿಕ ನಿಲುವು ಏನೆಂದರೆ ಶರಣಚಳುವಳಿಗೆ ಸೋಲಿಲ್ಲ. ಅವರ ದೃಷ್ಟಿಯಲ್ಲಿ ಈ ಚಳುವಳಿ ಮೂಲತಃ ಮೇಲ್ಜಾತಿ ನಗರಗಳ ಧಾರ್ಮಿಕ ದಬ್ಬಾಳಿಕೆಯ ವಿರುದ್ಧ ಕೆಳಜಾತಿಗಳು ಕೈಗೊಂಡ ಹೋರಾಟ. ಈ ಅನುಯಾಯಿಗಳಿಂದಲೇ ಬಸವ ಕಲ್ಯಾಣದಲ್ಲಿ ಜೀವಂತವಾಗುತ್ತಾ ಹೋಗುತ್ತಾರೆ. ಬಸವ ಕಲ್ಯಾಣವನ್ನು ತೊರೆದಿರುವುದಕ್ಕೆ ಕಾರಣ ಬಿಜ್ಜಳನ ಕ್ರೌರ್ಯ. ಬಸವನನ್ನು ಬಿಂಬಿಸುವ ಚೆನ್ನ ಬಸವಣ್ಣ ಒಂದು ಕಡೆಯಾದರೆ, ಕತ್ತಿ ಆಯುಧಗಳನ್ನು ಹಿಡಿದ ಇನ್ನೊಂದು

ಶರಣರ ಗುಂಪು ಒಂದು ಕಡೆಯಾಗಿರುವುದು ನಾಟಕ ಒಂದೇ ಜಾಡಿನಲ್ಲಿ ನಡೆಯಲು ಅನುವಾಗುತ್ತದೆ. ಮಾಚಿದೇವನ ನಾಯಕತ್ವದಲ್ಲಿ ಹಿಂಸೆಯಿಂದಲೇ ಕಲ್ಯಾಣದ ವೈಭವವನ್ನು ಪುನಃ ನಿರ್ಮಿಸಬೇಕೆಂಬ ಹಂಬಲ ವ್ಯಕ್ತವಾಗುತ್ತದೆ. ಬಸವನ ಸಾವು, ಚಳುವಳಿಗೆ ಆದ ಹಿನ್ನೆಡೆ ಇವು ಶರಣ ಸಮುದಾಯವನ್ನು ಕೆರಳಿಸಲು ಕಾರಣವಾಗುತ್ತದೆ. ಈ ನಾಟಕದಲ್ಲಿ "ಬಸವಣ್ಣನ ಆಶಯಗಳು ಬಿಜ್ಜಳನ ಕೌರ್ಯದಿಂದ ನುಚ್ಚು ನೂರಾಗುತ್ತವೆ". ಹಿಂಸೆಗೆ ಹಿಂಸೆ ಎಂಬಂತೆ ಕಲಿಕೇತಯ್ಯ, ಬಹುರೂಪಿಚೌಡಯ್ಯ, ಮೋಳಿಗೆ ಮಾರಯ್ಯ, ಹೆಂಡದ ಮಾರಯ್ಯ ಎಲ್ಲರೂ ಬಿಜ್ಜಳನ ವಿರುದ್ಧವಾಗಿ ಹಿಂಸಾಯುದ್ಧ ಸಾರುತ್ತಾರೆ.

ನಾಟಕಕಾರರು ಹೇಳುವಂತೆ ನಾಟಕವು ಶಿಶಿರ ಮತ್ತು ಚೈತ್ರಮಾಸಗಳೆರಡರಲ್ಲಿ ನಡೆಯುತ್ತದೆ. ಹಳೆಯದೆಲ್ಲಾ ಅಳಿದು ಹೊಸ ಚಿಗುರಿಗೆ ನಾಟಕ ನಾಂದಿಯಾಗುತ್ತದೆ. ಇದರಿಂದಾಗಿ ನಾಟಕದ ಆಶಯ ಮತ್ತು ನಿಲುವುಗಳಿಗೆ ಯಾವುದೇ ಧಕ್ಕೆಯಾಗುವುದಿಲ್ಲ. ಇಲ್ಲಿ ಬಿಜ್ಜಳ ಶಿಶಿರನಾಗಿ ಕೌರ್ಯದ ಮೂಲಕ ಬದುಕನ್ನು ನಾಶಪಡಿಸುವ ವ್ಯಕ್ತಿಯಾಗಿ ಕಂಡರೆ, ಚೈತ್ರವು ಹೊಸ ಬದುಕಿನ ಚಿಗುರಾಗುತ್ತದೆ. ಈ ನಾಟಕದ ಮತ್ತೊಂದು ವಿಶೇಷವೆಂದರೆ ಬಸವಣ್ಣ ೧೨ನೇ ಶತಮಾನದಲ್ಲಿ ಇದ್ದವನು ಆದರೆ ಅವನ ತತ್ವ ವಿಚಾರಗಳು ಎಲ್ಲಾ ಕಾಲಕ್ಕೂ ಜೀವನೋತ್ಸಾಹವನ್ನು ನೀಡುವಂತಹವಾಗಿದ್ದವು ಎಂಬುದನ್ನು ನಾಟಕವು ತಿಳಿಸುತ್ತದೆ.ಬಸವನ ತತ್ವಗಳು ಪ್ರಸ್ತುತವೂ ಹೌದು ಎಂಬುದನ್ನು ಕಾಣಬಹುದು. ನಾಟಕವು ಶರಣರು ಮತ್ತು ಬಿಜ್ಜಳನ ಸಂಘರ್ಷ, ಬಸವನ ಮತ್ತು ವೈದಿಕರ ತತ್ವಗಳ ಸಂಘರ್ಷ ಈ ಎರಡನ್ನು ಕ್ರಿಯಾರೂಪವಾಗಿಸುತ್ತದೆ.

ಬಸವನ ತತ್ವ ಹೇಳುವುದರಲ್ಲಿ ಮಾಡಿರುವ ಪಾತ್ರಗಳಿಂದ ಈ ನಾಟಕ ವೈಶಿಷ್ಟತೆಯನ್ನು ಪಡೆದಿದೆ. ಬಸವ ಸಂಗಮಕ್ಕೆ ನಡೆದಾಗ ಮಹಾಮನೆಯನ್ನು ಉಳಿಸಬೇಕೆಂಬ ಧಾವಂತದಿಂದ ನೀಲಾಂಬಿಕೆ ಕಲ್ಯಾಣದಲ್ಲೇ ಉಳಿಯುತ್ತಾಳೆ. ಕಲ್ಯಾಣ ಹೊತ್ತಿ ಉರಿಯುತ್ತಿದ್ದರೂ ದಾಸೋಹ ಕಾರ್ಯವನ್ನು ನಿಲ್ಲಿಸದೇ ನೀಲಾಂಬಿಕೆ ಸೋಮವ್ವನ ಜೊತೆಗೂಡಿ ದಾಸೋಹ ಮಾಡುತ್ತಾಳೆ. ಬಸವನ ತತ್ವ ಅಳಿಯಬಾರದೆಂಬ ಮಹಾದಾಸೆಯಿಂದ ಬಸವಾದಿಗಿಂತಲೂ ತತ್ವ ಮುಖ್ಯ, ವ್ಯಕ್ತಿಗಿಂತಲೂ ಸಮಾಜ ಮುಖ್ಯ ಎಂಬ ಮನೋಧರ್ಮವನ್ನು ಸಾರುತ್ತಾಳೆ. ಬಸವನ ಮರಣದ ವಿಷಯ ತಿಳಿದಾಗಲೂ ಪರಿತಪಿಸದ ನೀಲಾಂಬಿಕೆ ಬಸವನ ತತ್ವ ಎಂತಹ ಪ್ರಭಾವ ಬೀರಿತ್ತೆಂದು ತಿಳಿಯುತ್ತದೆ.

ಈ ನಾಟಕವು ಕವನಗಳ ಮೂಲಕ ಹೊಸ ಹೊಸ ವಿಚಾರಗಳ ಪ್ರಸ್ತಾಪಕ್ಕೆ ಇಂಬು ನೀಡುತ್ತದೆ. ಪ್ರಾರಂ ಭದಿಂದಲೇ ಪ್ರಾರಂಭವಾಗುವ ಈ ಕವನಗಳು ಕತೆಯ ಓದನ್ನು ಎಲ್ಲೂ ತಡೆಯುವುದಿಲ್ಲ. ಅಲ್ಲಲ್ಲಿ ವಚನಕಾರರ ವಚನಗಳನ್ನು ಬಳಸಿಕೊಂಡು ಕಥೆ ನಿಜವಾಗಿ ನಡೆದಿದ್ದೇನೋ ಎಂಬಂತೆ ಎಲ್ಲೂ ಅನುಮಾನ ಬಾರದಂತೆ ನಡೆಸಿದ್ದಾರೆ. ಈ ಕವನಗಳು ಕ್ರಿಯಾತ್ಮಕವಾಗಿ ೧೨ನೇ ಶತಮಾನದ ಶರಣರ ಅಭಿವ್ಯಕ್ತಿಗಳನ್ನು ಒಳಗೊಂಡಿವೆ. ನಾಟಕದಲ್ಲಿ ಚರಿತ್ರೆಯಿದೆ, ಪುರಾಣವಿದೆ, ಜಾನಪದವಿದೆ. ಈ ಎಲ್ಲಾ ವಿಷಯಗಳು ಕ್ರಿಯಾತ್ಮಕವಾಗಿ ರೂಪುಗೊಂಡಿವೆ. ಇಲ್ಲಿನ ರಚನೆಗಳು ಚಾರಿತ್ರಿಕ ನೆಲೆಯನ್ನು ಜಾಗೃತಗೊಳಿಸಿವೆ. ಪ್ರಸ್ತುತದಲ್ಲಿ ಈ ಎಲ್ಲಾ ಘಟನೆಗಳು ಜೀವ ಪಡೆದು ಕ್ರಿಯಾ ಚೈತನ್ಯಗಳಾಗಿವೆ ಎನಿಸುತ್ತದೆ.

'ತಲೆದಂಡ' ನಾಟಕದಲ್ಲೂ ಶರಣ ಚಳುವಳಿಯ ಅಮೂಲ್ಯ ತತ್ವವಾದ ಕಾಯಕತತ್ವದ ಬಗ್ಗೆ ಅದರ ಪ್ರಭಾವ ಪರಿಣಾಮಗಳ ಬಗ್ಗೆ ಬಿಜ್ಜಳ ಪಾತ್ರದ ಮೂಲಕವೇ ಪರಿಚಯಿಸುವುದನ್ನು ಕಾಣಬಹುದು.

ಮಂಚಣ್ಣ ಕ್ರಮಿತ ಮಹಾಮನೆಯಲ್ಲಿ ನಡೆಯುತ್ತಿದ್ದ ದಾಸೋಹದ ಬಗೆಗೆ ಅದಕ್ಕೆ ಬೇಕಾದ ಹಣದ ಬಗೆಗೆ ಹಾಗೂ ಭಂಡಾರ ಹಣ ಕೊಳ್ಳೆ ಹೊಡೆದುದಕ್ಕೆ ಸಂಬಂಧ ಕೋಡಿಸಿ ಹೊರಟಾಗ....

ಬಿಜ್ಜಳ : "ನನ್ನ ಮಗ ಒಬ್ಬನೇ ದಡ್ಡ ಅಂತ ತಿಳಿದುಕೊಂಡಿದ್ದ ಇಡೀ ಕಲ್ಯಾಣ ಆs ಟಾs ಶ್ಯಾಣಾ ಅಂತಾತು... ನಾ ಇಲ್ಲಿ ಬಂದಾಗಿನ ತೊಟ್ಟು ಹತ್ತು ವರ್ಷದಾಗ ಕಲ್ಯಾಣ ಪಟ್ಟಣ ಹೀಂಗ ಅಡ್ಡಾದಿಡ್ಡ ಬೆಳೆದೈತಿ, ಯಾಕಂತ ತಿಳಿಕೊಂಡಿರಿ? ನನ್ನ ಸಂಗಾಟ ಬಸವಣ್ಣ ಬಂದ. ಪ್ರತಿಯೊಬ್ಬ ಶರಣ "ಕಾಯಕವೇ ಕೈಲಾಸ" ಅಂತ ರಟ್ಟೆಮುರಿದು ದುಡಿತಾನ, ಕೂಲಿ ಮಾತ್ರ ಅವತ್ತಿನ ದಾಸೋಹಕ್ಕೆ ಏಟು ಬೇಕೋ ಆs ಟಾs ತಗೋತಾನ.... ಇಂದು ರಾಜ್ಯದ ಮೂಲೆಮೂಲೆಯಿಂದ ವ್ಯಾಪಾರಸ್ಥರು ಕಲ್ಯಾಣಕ್ಕೆ ಬರ್ತಾರ, "ಕಲ್ಯಾಣದಾಗ ಜಗಳಿಲ್ಲ, ಪಗಳಿಲ್ಲ, ಕಳವಿಲ್ಲ, ಕೊಂಡಿಲ್ಲ, ಧಾರಣೆ ಕಡಿಮೆ, ರೋಖ ವ್ಯವಹಾರ, ಕೆಲಸ ಭಂದ ಹಾಕಿ ಹರಸಿ ತಮ್ಮ ಸಂಪತ್ತು ತಂದು ಇಲ್ಲಿ ಸುರೀತಾರ" ಎಂದು ಹೇಳುವಲ್ಲಿ ಈ ನಾಟಕವು ಕಾಯಕತತ್ವದ ಮಹತ್ವದ ತಿಳುವಳಿಕೆಯನ್ನು ನೀಡುವುದು ಒಂದು ವಿಶೇಷವಾಗಿದೆ.

ಈ ನಾಟಕಗಳ ಮತ್ತೊಂದು ವಿಶೇಷವೆಂದರೆ ದೇವರು-ದೇವಾಲಯಗಳ ನಿರಾಕರಣೆಯ ತತ್ವಗಳು ಪ್ರತಿಪಾದಿತಗೊಂಡಿರುವುದನ್ನು ನೋಡಬಹುದು.

**ಆಶಯಗಳು :**

"ಧಾರ್ಮಿಕ ಮತ್ತು ರಾಜಕೀಯ ಅಹಂಕಾರಗಳಿಂದ ಬಸವಣ್ಣನವರ ಮಹದಾಸೆಯ ಮನೆ 'ಮಹಾಮನೆ' ನುಚ್ಚುನೂರಾಯಿತು. ಇಡೀ ರಾಜ್ಯವು ಬಸವಣ್ಣನಿಲ್ಲದ ಕಲ್ಯಾಣವಾಯಿತು. ಅಂದರೆ ಜೀವಚೈತನ್ಯವಿಲ್ಲದ ದೇಹವಾಯಿತು. ನಾಟಕಕಾರ ಇನ್ನು ಮಹಾಮನೆ ಕಟ್ಟುವ ಆಸೆ ದುಡಿಮೆಗಾರರಲ್ಲಿ ತುಂಬಿದೆ ಎಂಬುದನ್ನು ಗುರುತಿಸಿದ್ದಾನೆ. "ಚಳಿಗಾಲ ಕಳೆದ ನಂತರ ಹೊಸವಸಂತ ಋತು ಹುಟ್ಟಿಕೊಳ್ಳುತ್ತದೆಂಬುದು ಈ ನಾಟಕದ ಪ್ರಮುಖ ಆಶಯವಾಗಿದೆ".[೨]

ಕೆಲವು ನಾಟಕಗಳು ಹರಳಯ್ಯ ಮತ್ತು ಮಧುವರಸರ ಬೀಗತನದ ಪರಿಣಾಮವಾಗಿ ಬಸವಣ್ಣನ ಜೀವನವನ್ನು ಅದು ಹೇಗೆ ಆಹುತಿ ತೆಗೆದುಕೊಂಡಿತು ಎಂಬುದನ್ನು ಬಿಂಬಿಸಲು ಶ್ರಮಿಸುತ್ತವೆ. ಆದರೆ ಕಂಬಾರರ ಈ ನಾಟಕದಲ್ಲಿ ಆ ಬೀಗತನ ಹಿನ್ನೆಲೆಯಲ್ಲಿದೆ. ಮತ್ತು ಜನಸಾಮಾನ್ಯರಿಗೆ ಅವರದೇ ಆದ ಧರ್ಮವೊಂದು ಸಿಕ್ಕರೆ, ಅವರೂ ಕೂಡ ಆಮೂಲಾಗ್ರವಾಗಿ ಬದಲಾಗುತ್ತಾರೆಂಬ ಆಶಾವಾದವಿದೆ.

ನವ್ಯ ಸಂದರ್ಭದಲ್ಲಿ ಪ್ರಕಟವಾದ ಪಿ.ಲಂಕೇಶರ 'ಸಂಕ್ರಾಂತಿ' ನಾಟಕ ಈ ಸಂಪ್ರದಾಯಬದ್ಧ ಭಾವನೆಗಳಿಗೆ ತೀವ್ರ ಶಾಕ ಕೊಡುವ ಸ್ವರೂಪದಲ್ಲಿ ಪ್ರಕಟವಾಯಿತು. ಮನುಷ್ಯನ ಅಸ್ತಿತ್ವದ ಪ್ರಶ್ನೆ ಅವನ ಸಣ್ಣತನ-ಧಾರ್ಮಿಕ ಸಂಘರ್ಷ, ಹೋರಾಟ, ತಲ್ಲಣ, ಅಪನಂಬಿಕೆ, ಅನಿಶ್ಚಯತೆ ಮುಂತಾದ ಮೌಲ್ಯಗಳ ಶೋಧನೆಯಲ್ಲಿದ್ದ ನವ್ಯದ ಮನೋಧರ್ಮದಂತೆ ಸಂಕ್ರಾಂತಿಯಲ್ಲಿನ ಎಲ್ಲಾ ಪಾತ್ರಗಳು ತಮ್ಮ ಮನುಷ್ಯ ಸಂಕೀರ್ಣತೆಗಳಲ್ಲಿ ಆಯ್ಕೆಯ ಎದುರಾಗುತ್ತಾರೆ. ಒಂದು ಜಾತಿಯನ್ನು ಬಿಟ್ಟು ಇನ್ನೊಂದು ಜಾತಿಯನ್ನು ಆಯ್ಕೆ ಮಾಡಿಕೊಳ್ಳುವುದು ಸುಲಭವಲ್ಲ. ಅದೊಂದು ಸಂಕೀರ್ಣವಾದ ಇಡೀ ವ್ಯಕ್ತಿತ್ವದ ಕ್ರಾಂತಿಕಾರಿ

ಬದಲಾವಣೆಗೆ ಆಹ್ವಾನವಿದ್ದಂತೆ ಇದರಲ್ಲಿ ಯಶಸ್ಸಿಗಿಂತ ಸೋಲು-ಸಹಜ ಎಂದು ನಾಟಕ ಹೇಳಲು ಬಯಸುತ್ತದೆ.

'ಶಿವರಾತ್ರಿ' ನಾಟಕದಲ್ಲಿ ಬಸವಣ್ಣ ತನ್ನ ಆಶಯವಾದ ವ್ಯವಸ್ಥೆಯ ನಿಂತ ನೀರಿಗೆ ಹರಿವು ನೀಡಿ, ಹೊಸದರೊಂದಿಗೆ ಸೇರಿಸಿ "ಶಿವಪುರವೆಂಬ ಕೂಡಲಸಂಗಮವನ್ನು ರೂಪಿಸಬೇಕೆಂಬುದು ನಮ್ಮ ಕನಸಾಗಿತ್ತು' ಎಂದು ಹೇಳುತ್ತಾರೆ. ಕಂಬಾರರ ಕೃತಿಗಳ ಕ್ಷೇತ್ರ ಎಲ್ಲಾ ಕಡೆ ಶಿವಾಪುರ. ಇಲ್ಲಿ ಮಾತ್ರ ಅದರ ರಚನೆ ಆಶಯ ರೂಪದಲ್ಲಿದೆ.

"ಮಹಾಚೈತ್ರ ನಾಟಕವು ಬಸವಣ್ಣ ವೇದಿಕೆಗೆ ಬರದಿದ್ದರೂ ಎಲ್ಲಾ ಹಂತಗಳಲ್ಲಿ ಅವರ ಮಹತ್ವವನ್ನು ಸ್ಥಾಪಿಸಲಾಗಿದೆ. ಅಂದರೆ ಬಸವಣ್ಣ ಸಂಘಟಿಸಿದ ಸಂಘರ್ಷ ಲೌಕಿಕ ಪಾರಲೌಕಿಕವಾಗಿ ವಿಸ್ತರಿಸಿಕೊಳ್ಳುವ ಮತ್ತು ಸಂಘರ್ಷದ ನಿರಂತರತೆಯನ್ನು ಕಾದುಕೊಳ್ಳುವ ಆಶಯವನ್ನು ಪ್ರಸ್ತುತಪಡಿಸುತ್ತದೆ".[3] ಈ ನಾಟಕದ ಆಶಯ ಮಾಚಯ್ಯನ ಒಂದು ಮಾತಿನಲ್ಲಿ ಅಡಗಿದೆ. "ನಮ್ಮ ಕೈಗಳಲ್ಲಿ ಇಂತಹ ನೂರಾರು ಕಲ್ಯಾಣಗಳು ಅಡಗಿವೆ". ದುಡಿಯುವ ಕೈಗಳಲ್ಲಿ ಕಟ್ಟುವ ಶಕ್ತಿ ಅಡಗಿದೆ. ಬಸವಣ್ಣನ ಕಾಯಕತತ್ವದ ಪ್ರಾಮುಖ್ಯತೆಯು ಕನಸಿನ ನಗರಗಳನ್ನು ನನಸಾಗಿಸುವಲ್ಲಿ ಕಾಣಬಹುದಾಗಿದೆ. ರಕ್ತ ಮೆತ್ತಿಕೊಂಡ ಕಲ್ಯಾಣ ಮತ್ತೆ ಹಸಿರಿನ ಮರಗಳಿಂದ ಕಂಗೊಳಿಸುತ್ತದೆ. ಮಹಾಚೈತ್ರದ ಹೊಸ ಚಿಗುರು ಸೃಷ್ಟಿಕ್ರಿಯೆಯ ಪ್ರತೀಕವಾಗಿದೆ. ತಬ್ಬಲಿತನದಲ್ಲಿದ್ದ ಶರಣ ಸಮೂಹವು ಮತ್ತೆ ಭಿತ್ತಿ ತಿಳಿದುಕೊಳ್ಳುವ ಹಸಿರು ಕನಸುಗಳು ಮಹಾಚೈತ್ರದಲ್ಲಿ ದನಿಯನ್ನು ಪಡೆದುಕೊಳ್ಳುತ್ತದೆ... ಎಂಬುದು ಮಹಾಚೈತ್ರದಲ್ಲಿ ಅಡಗಿದ ಒಳನುಡಿಯಾಗಿದೆ.

ಬಸವಣ್ಣ ಕೈಬಿಟ್ಟ ಚಳುವಳಿಯನ್ನು ಕೆಳವರ್ಗದ ಜನರು ಕೈಗೆತ್ತಿಕೊಂಡು ಮುಂದುವರೆಸುತ್ತಾರೆಂಬ ಸದುದ್ದೇಶದಿಂದ ಶಿವಪ್ರಕಾಶ್ ಈ ನಾಟಕ ಬರೆದಿರಬಹುದಾದರೂ, ಅದು ನಾಟಕದ ಒಳಗಿಂದಲೇ ಮಾಡುವ ಆಶಯವಾಗಿ ಕಾಣದೇ, ಅದು ಲೇಖಕ ಆ ಪಾತ್ರಗಳು ಮೂಲಕ ಹೆಣೆದ ಒಂದು ಕೃತಕ ಆಶಯವಾಗಿ ಕಾಣುತ್ತದೆ.

"ಪಿ.ಲಂಕೇಶರ 'ಸಂಕ್ರಾಂತಿ' ನಾಟಕದಲ್ಲಿ ಮುಖ್ಯವಾಗಿ ಉಜ್ಜ ಎನ್ನುವ ವ್ಯಕ್ತಿ ತನ್ನ ಸಮುದಾಯ ಮತ್ತು ಅನನ್ಯತೆಯನ್ನು ಉಳಿಸಿಕೊಳ್ಳುವ ಪ್ರಯತ್ನದಲ್ಲಿದ್ದರೆ, ಅವನ ಮಗ ರುದ್ರ ತನ್ನ ಸಮುದಾಯದ ಅನನ್ಯತೆ ಮತ್ತು ಅಸ್ಮಿತೆಯನ್ನು ಮೀರುವ ಪ್ರವೃತ್ತಿಯನ್ನು ಹೊಂದಿರುತ್ತಾನೆ. ಇದೇ ರೀತಿಯಾಗಿ ಉಷಾ ಎನ್ನುವ ಪಾತ್ರ ತನ್ನ ಪಾತ್ರ ತನ್ನ ಸಮುದಾಯ ಮತ್ತು ಅಸ್ಮಿತೆಯನ್ನು ಮೀರುವ ಹಾಗೂ ಕೆಳಜಾತಿಯ ರುದ್ರನನ್ನು ಇಷ್ಟಪಡುವುದರ ಮೂಲಕ ಮುಖ್ಯ ಘಟಕವಾಗಿ ಕಾಣುತ್ತಾಳೆ. ಇಲ್ಲಿ ರುದ್ರ, ಉಷಾ, ಉಜ್ಜ ಈ ಮೂರು ಪಾತ್ರಗಳು ತಮ್ಮತನವನ್ನು ಹುಡುಕಿಕೊಳ್ಳುವುದರಲ್ಲಿ ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕವಾಗಿ ಸೌಹಾರ್ದತೆಯ ಆಶಯವನ್ನು ಈ ಪಾತ್ರಗಳಲ್ಲಿ ಮುಖ್ಯವಾಗಿ ಕಾಣುತ್ತೇವೆ. ಈ ಹಿನ್ನೆಲೆಯಲ್ಲಿ ಬಸವಣ್ಣ, ಬಿಜ್ಜಳ ಮೌನಿಯಾಗಿರುವುದನ್ನು ಆಶಯಾತ್ಮಕವಾಗಿ ಗುರುತಿಸಬಹುದು".

ಬಸವಣ್ಣನ ಕುರಿತ ನಾಟಕಗಳಾದ ಮಹಾಚೈತ್ರ, ಸಂಕ್ರಾಂತಿ, ತಲೆದಂಡ, ಶಿವರಾತ್ರಿ ನಾಟಕಗಳನ್ನೊಳಗೊಂಡಂತೆ ಮುಖ್ಯ ಆಶಯವನ್ನು ಗುರುತಿಸುತ್ತಾ ಹರಳಯ್ಯ ಮತ್ತು ಮಧುವರಸನ ಮಕ್ಕಳ ವಿವಾಹವನ್ನು ಆಧರಿಸಿ ಒಂದು ಶೂದ್ರ ಮತ್ತು ಬ್ರಾಹ್ಮಣ ಜಾತಿಗಳ ಸಮ್ಮಿಲನವನ್ನು ಬಸವಣ್ಣನವರು ಒಂದುಗೂಡಿಸುವ ಪ್ರಯತ್ನದಲ್ಲಿದ್ದರೆ ಅಂದಿನ ಬ್ರಾಹ್ಮಣವರ್ಗ ಇದನ್ನು ನಿರಾಕರಿಸಿವೆ. ಹಾಗೆಯೇ ಶೂದ್ರ

ವರ್ಗಗಳು ಇದರ ಕುರಿತಂತೆ ಮೌಖಿಯಾಗಿರುವುದನ್ನು ಕಾಣುತ್ತೇವೆ. ಮುಖ್ಯವಾಗಿ ಬಿಜ್ಜಳನ ಆಶಯವು ಬಸವಣ್ಣನ ಆಶಯದಂತೆ ಇದ್ದರೂ ತನ್ನ ಆಡಳಿತದ ಉದ್ದೇಶದಿಂದ ನಿರಾಕರಿಸಬಹುದು. ಒಟ್ಟಾರೆಯಾಗಿ ಧರ್ಮ, ಜಾತಿ ಮತ್ತು ಮನುಷ್ಯತ್ವದ ನೆಲೆಯಲ್ಲಿ ಮಾನವಧರ್ಮದ ಆಶಯವಾಗಿ ಗುರುತಿಸಬಹುದು.

೧೨ನೇ ಶತಮಾನದ ಶರಣ ಚಳುವಳಿಗಳು ಬಸವಣ್ಣನ ನೇತೃತ್ವ ವಹಿಸಿರುವಂತೆ ಸಾಮಾಜಿಕವಾಗಿ, ಧಾರ್ಮಿಕವಾಗಿ ಹೊಸ ಅಭಿವ್ಯಕ್ತಿ ವಿಧಾನವನ್ನು ಅಂತರ್ ಜಾತಿಯ ವಿವಾಹ ಎನ್ನುವ ರೂಪಕದಿಂದ ಹೊಸ ಬೆಳವಣಿಗೆಯನ್ನು ಪ್ರಸ್ತುತವಾಗಿ ಚಿತ್ರದುರ್ಗದ ಮುರುಘಾಮಠದ ಅಂತರ್ ಜಾತಿಯ ವಿವಾಹ ಪದ್ಧತಿಯನ್ನು ಹೊಸ ಆಶಯಾತ್ಮಕ ಅಭಿವ್ಯಕ್ತಿಯಾಗಿ ಕಾಣಬಹುದು. ಎಚ್.ಎಸ್.ಶಿವಪ್ರಕಾಶರ 'ಮಹಾಚೈತ್ರ' ಎಂಬ ನಾಟಕದಲ್ಲಿ ಶೀಲವಂತ-ಮಾಧವಿಯರ ಮದುವೆಯ ಮೂಲಕ ಹೆಣ್ಣು-ಗಂಡಿನ ನಡುವಿನ ಮುಕ್ತ ಪ್ರೇಮ ಮಾತ್ರ ಶಾಶ್ವತವಾದುದು ಎಂಬ ಆಶಯವನ್ನು ತಿಳಿಸಿಕೊಡುತ್ತದೆ. ಪ್ರಜಾಪ್ರಭುತ್ವದ ಮೌಲಿಕತೆಯನ್ನು ಪ್ರತಿಪಾದಿಸುವ ಕಂಬಾರರು ನಾಗರೀಕತೆಯ ಮೌಲ್ಯಗಳು ಎನಿಸಿಕೊಂಡಿರುವ ಹಣ, ಅಧಿಕಾರ, ಪ್ರಭುತ್ವಗಳನ್ನು ನಿರಾಕರಿಸುತ್ತಾರೆ. ಕಂಬಾರರು ಸಮಾಜವಾದಿ ಆಶಯವನ್ನು ವ್ಯಕ್ತಪಡಿಸುತ್ತಾರೆ. "ಕಾರ್ನಾಡರು ಸಮಕಾಲೀನ ಸಂವೇದನೆಯನ್ನು, ಆಧುನಿಕತೆಯ ಆಶಯಗಳನ್ನು ಪರಿಣಾಮಕಾರಿಯಾಗಿ ಬಿಂಬಿಸುತ್ತಾರೆ. ಇವರು ಆಧುನಿಕ ಪಾಶ್ಚಾತ್ಯ ನಾಟಕಗಳಿಂದ ಪ್ರಭಾವಿತರಾಗಿ, ಆಧುನಿಕತೆಯನ್ನು ನವ್ಯ ಪ್ರಜ್ಞೆಯನ್ನು ಜೊತೆಯಾಗಿಸಿ ಕರ್ನಾಟಕದ ಚೌಕಟ್ಟನ್ನು ಮೀರಿ ಭಾರತೀಯತೆಯನ್ನು ಗಮನದಲ್ಲಿಟ್ಟುಕೊಂಡು ಬರೆಯುವ ಕಾರ್ನಾಡರು ತಮ್ಮೆಲ್ಲ ನಾಟಕಗಳಲ್ಲಿ ಮನುಷ್ಯನ ಮೂಲಭೂತ ಪ್ರವೃತ್ತಿಗಳನ್ನು ಆತನ ಅಸ್ತಿತ್ವದ ಪ್ರಶ್ನೆಗಳನ್ನು ಆಯಾ ಸಾಮಾಜಿಕ ಸಂದರ್ಭದಲ್ಲಿಟ್ಟು ಚಿತ್ರಿಸುತ್ತಾರೆ. ವಸ್ತು ವಿಷಯಕ್ಕಿಂತ ಸಮಕಾಲೀನ ಸಂವೇದನೆ ಮುಖ್ಯವಾಗುತ್ತದೆ".

ಪಿ.ಲಂಕೇಶರು ಸಮಕಾಲೀನ ಸಮಾಜದ ವೈಪರೀತ್ಯಗಳು, ಆಧುನಿಕ ಸಮಾಜದ ಲಂಪಟತನ, ಸುಳ್ಳು, ಸ್ವಾರ್ಥ, ಸುಶಿಕ್ಷಿತರ ಸಣ್ಣತನ, ಮಧ್ಯಮವರ್ಗದ ದಾಂಪತ್ಯಗಳಲ್ಲಿನ ಬಿಕ್ಕಟ್ಟುಗಳನ್ನು ಪ್ರಧಾನವಾಗಿ ತಮ್ಮ ನಾಟಕಗಳಲ್ಲಿ ತರುತ್ತಾರೆ, ಕೌಟುಂಬಿಕ ಸುಖದ ಹಂಬಲ, ವ್ಯಕ್ತಿ ಸ್ವಾತಂತ್ರ್ಯದ ಹುಡುಕಾಟಗಳು, ವ್ಯಕ್ತಿಯು ಅಂತ ಸತ್ವದ ಹುಡುಕಾಟವು ಇವರ ನಾಟಕಗಳಲ್ಲಿ ಬರುತ್ತವೆ. ಇವರ 'ಸಂಕ್ರಾಂತಿ' ನಾಟಕ ಪ್ರೇಮ ಪ್ರಕರಣವನ್ನು ಮುನ್ನೆಲೆಗೆ ತಂದು ಸಾಮಾನ್ಯ ಜನರ ಬದುಕನ್ನು ಅನಾವರಣ ಮಾಡಿದೆ.ಎಚ್.ಎಸ್.ಶಿವಪ್ರಕಾಶರು ಶಿಷ್ಟ ಪರಂಪರೆಗಳನ್ನು ಬಿಟ್ಟು ಮೇಲ್ಜಾತಿಯ ಚರಿತ್ರೆಯನ್ನು ಬದಿಗಿಟ್ಟು, ಪುರುಷ ಚರಿತ್ರೆಯನ್ನು ನಿರ್ಲಕ್ಷಿಸಿ ತಳ ಸಮುದಾಯದ ಪರಂಪರೆಯನ್ನು ನಾಟಕದ ವಸ್ತುವಾಗಿ ಬಳಸುತ್ತಾರೆ.

## ಕೊನೆ ಟಿಪ್ಪಣಿಗಳು

೦೧. ಬಸವಣ್ಣ ಪುನರ್ಲೇಖ, ಕರೀಗೌಡ ಬೀಚನಹಳ್ಳಿ, ಪು.ಸಂ.೧೮೦

೦೨. ಆಧುನಿಕ ನಾಟಕಗಳಲ್ಲಿ ಬಸವಪುರಾಣ ಪು.ಸಂ.೮೩

೦೩. ಗಿರೀಶ್ ಕಾರ್ನಾಡ ನಾಟಕಗಳು, ಕೃಷ್ಣಮೂತಿ ಚಂದರ್., ಪು.ಸಂ.೧೫೦

# ಅಧ್ಯಾಯ-೦೬
## ಸಮಾರೋಪ

ಕನ್ನಡ ಸಾಹಿತ್ಯ ಚರಿತ್ರೆ ಹಲವಾರು ಪ್ರಕಾರಗಳನ್ನು ಒಳಗೊಂಡು ವಿಶಿಷ್ಟ ನೆಲೆಯಲ್ಲಿ ತಾತ್ವಿಕತೆಯನ್ನು ಭಿತ್ತರಿಸುತ್ತಾ ಚಿಂತನೆಗಳನ್ನು ಪಸರಿಸುವ ಮಹತ್ತರ ನೆಲೆಯಾಗಿದೆ. ೧೨ನೇ ಶತಮಾನವು ಶರಣರ ಆಂದೋಲನ ಯುಗವೆಂದು ಪ್ರಸಿದ್ಧಿಯನ್ನು ಪಡೆದಿದೆ. ಕಾರಣ ಆಗಿನ ಸಾಹಿತ್ಯಎಲ್ಲ ಚಂಪೂವಿನ ಬಿಗಿ ಬಂಧನದಲ್ಲಿ ಕಡಿತಗೊಂಡಿದ್ದು, ಆ ಪರಿಸ್ಥಿತಿಯ ಕಾಲಾವಧಿಯಲ್ಲಿ ಬುದ್ಧಿವಂತೆನಿಸಿಕೊಳ್ಳುವವರೆಲ್ಲರೂ ಕವಿಗಳು, ಉಭಯ ಭಾಷಾ ವಿಶಾರದರೂ, ಪಂಡಿತರೂ ಎನಿಸಿಕೊಳ್ಳುವುದರಲ್ಲಿ ತೊಡಗಿದ್ದರೆಂಬುದು ವ್ಯಕ್ತವಾಗುತ್ತದೆ. ಆದರೆ ವಚನಕಾರರು ಈ ರೀತಿಯಾಗಿ ಪಂಡಿತರೆನಿಸಿಕೊಳ್ಳಲು, ಕೀರ್ತಿಗಳಿಸಲು ಎಂದಿಗೂ ಹೆಣಗಲಿಲ್ಲ. ಸಮಾಜದಲ್ಲಿದ್ದ ಮೌಢ್ಯಗಳನ್ನು, ಅಂಧಶ್ರದ್ಧೆಗಳನ್ನು, ಅಸಮಾನತೆಯನ್ನು ಕಿತ್ತೊಗೆಯಲು ಪ್ರಾಮಾಣಿಕವಾಗಿ ಮಾಡಿದ ಪ್ರಯತ್ನ ಅಪ್ರತಿಮ ಅಂತೆಯೇ ಜನತೆಯ ಬದುಕಿಗೆ ಬೇಕಾದ ನೆಮ್ಮದಿಗೆ ಪೂರಕವೆನ್ನುವಂತೆ ವಚನಕಾರರು ದೇವಭಾಷೆಯಾದ ಸಂಸ್ಕೃತದ ಬದಲು ಸಾಮಾನ್ಯ ಜನರೆಲ್ಲರೂ ಮಾತನಾಡುತ್ತಿದ್ದ ಕನ್ನಡವನ್ನೇ ವಿಶಿಷ್ಟ ನುಡಿಯಾಗಿಸಿದರು.

ಶರಣರೆಲ್ಲರೂ ಕಾಯಕಕ್ಕೆ ದೈವತ್ವದ ಜೀವ ತುಂಬಿದರು. ಈ ಪಂಕ್ತಿಯಲ್ಲಿ ಬಸವಣ್ಣನ ಕಾರ್ಯ ಜಗತ್ತಿನಲ್ಲಿಯೇ ದಾರಿದಿಪ. ಅಂತೆಯೇ ಅನುಭವ ಮಂಟಪದ ಸ್ಥಾಪನೆ ಅದಕ್ಕೆ ನಾಂದಿಯಾಯಿತು. ವಚನ ಸಾಹಿತ್ಯವನ್ನು ಬೆಳಗಿದ ಬಸವಣ್ಣರ ಕಾರ್ಯ ಸಾಧನೆ ಮಹತ್ತರವಾದುದು. ಅವರ ನಿಷ್ಠೆ ಮತ್ತು ಪರಿಶ್ರಮದಿಂದ ಅವರು ಕೆಳವರ್ಗದವರ ಬಗ್ಗೆ ಹೊಂದಿದ್ದ ಅಭಿಮಾನ, ಪ್ರೀತಿ, ಕರುಣೆ ಈ ಎಲ್ಲಾ ಅಂಶಗಳಿಂದ ಜಗತ್ತಿಗೆ ಬೆಳಕಾಗಿ ನಿಲ್ಲಲ್ಲು ಸಾಧ್ಯವಾಯಿತು. ಆದ್ದರಿಂದ ಬಸವಣ್ಣನನ್ನು ಕುರಿತ ಆಧುನಿಕ ನಾಟಕಗಳು ಮತ್ತೆ ಮತ್ತೆ ರಚನೆಗೊಳ್ಳುತ್ತಲೇ ಇವೆ. ಸಮಾಜದಲ್ಲಿಯ ಸಮಸ್ಯೆಗಳಿಗೆ ಆತನಲ್ಲೂ ಪರಿಹಾರವಿದೆ ಎಂದು ಹುಡುಕಲು ಪ್ರಯತ್ನಿಸುತ್ತಾರೆ.

ಹೊಸಗನ್ನಡ ಸಾಹಿತ್ಯದಲ್ಲಿ ಪ್ರತಿಯೊಬ್ಬ ಲೇಖಕರು ಬಸವಣ್ಣನನ್ನು ನೋಡಿರುವ ವಿಧಾನ, ವಸ್ತುವಿನ ಬದಲಾವಣೆ ಹೇಗೆ ಭಿನ್ನವಾಗಿದೆ, ಇವತ್ತಿನ ಪಥ್ಯದ ಮೂಲಕ ಸಹೃದಯರಿಗೆ ಅವರು ಕೊಡುವ ಆಶಯಗಳೇನು ಅದರ ಪ್ರಭಾವ ಇವತ್ತಿನ ಸಮಾಜಕ್ಕೆ ಎಷ್ಟರ ಮಟ್ಟಿಗೆ ಪ್ರಭಾವ ಬೀರುತ್ತದೆ ಎಂದು ತಿಳಿದುಕೊಳ್ಳುವಾಗ ನನ್ನಲ್ಲಿಯೇ ನನಗೆ ಗೊತ್ತಿಲ್ಲದಂತೆ ವಿಶ್ಲೇಷಣಾ ವಿಧಾನ, ಚಿಂತಿಸುವ ಗುಣ ಬೆಳೆದುಕೊಂಡು ಬಂದಿದೆ.

ಅಧ್ಯಾಯ-೧ರಲ್ಲಿ ಅಧ್ಯಯನದ ಉದ್ದೇಶಗಳೇನು? ಎಂಬುದರ ಕುರಿತು ಹೇಳಲಾಗಿದೆ ಮತ್ತು ನಾನು ತೆಗೆದುಕೊಂಡಿರುವ ಅಧ್ಯಯನ ವ್ಯಾಪ್ತಿಯನ್ನು ಗುರುತಿಸಲಾಗಿದೆ. ನನ್ನ ಅಧ್ಯಯನಕ್ಕೆ ತೆಗೆದುಕೊಂಡಿರುವ ವಿಧಾನವನ್ನು ಗುರುತಿಸುವ(ತಿಳಿಸುವ) ಪ್ರಯತ್ನವನ್ನು ಈ ಅಧ್ಯಾಯದಲ್ಲಿ ಮಾಡಿದ್ದೇನೆ.

ಅಧ್ಯಾಯ-೨ರಲ್ಲಿ ನನ್ನ ಅಧ್ಯಯನಕ್ಕೆ ಸಂಬಂಧಿಸಿದಂತೆ ನನಗೆ ಸಹಾಯಕವಾಗುವಂತೆ ಈವರೆಗೆ ನಡೆದಿರುವ ಅಧ್ಯಯನಗಳ ಸಮೀಕ್ಷೆಯನ್ನು ತೆಗೆದುಕೊಂಡಿದ್ದೇನೆ.

ಅಧ್ಯಾಯ-೩ರಲ್ಲಿ ಬಸವಣ್ಣನ ಕುರಿತ ಆಧುನಿಕ ನಾಟಕಗಳಲ್ಲಿ ಪ್ರಭುತ್ವದ ನೆಲೆಗಳು ಎಂಬ ಅಧ್ಯಾಯದಲ್ಲಿ ನನ್ನ ಅಧ್ಯಯನ ವ್ಯಾಪ್ತಿಗೆ ಸಂಬಂಧಿಸಿದ ಪಿ.ಲಂಕೇಶ 'ಸಂಕ್ರಾಂತಿ', ಕಾರ್ನಾಡರ 'ತಲೆದಂಡ', ಎಚ್.ಎಸ್.ಶಿವಪ್ರಕಾಶರ 'ಮಹಾಚೈತ್ರ', ಕಂಬಾರರ 'ಶಿವರಾತ್ರಿ' ಈ ನಾಟಕಗಳಲ್ಲಿ ಯಾವ ಪ್ರಭುತ್ವ ಗೆಲುವನ್ನು ಸಾಧಿಸಿದೆ ಮತ್ತು ಯಾವ ಪ್ರಭುತ್ವ ಸೋಲುತ್ತದೆ ಎಂಬುದನ್ನು ತಿಳಿಸುವ ಪ್ರಯತ್ನ ಮಾಡಿದ್ದೇನೆ. ಬಿಜ್ಜಳನ ರಾಜಪ್ರಭುತ್ವ ಮತ್ತು ಬಸವಣ್ಣನ ಪ್ರಜಾಪ್ರಭುತ್ವ ಇವೆರಡರ ನಡುವಿನ ವಾಗ್ವಾದದ ಕುರಿತು ಚರ್ಚಿಸಿದ್ದೇನೆ. ಶಿವರಾತ್ರಿ ನಾಟಕದಲ್ಲಿ ಪ್ರಜಾಪ್ರಭುತ್ವ ಗೆಲ್ಲುತ್ತದೆ. ರಾಜಪ್ರಭುತ್ವ ಸೋಲುತ್ತದೆ. ಅಂದರೆ ಬಿಜ್ಜಳನು ರಾಜಪ್ರಭುತ್ವಕ್ಕಾಗಿ ಅಧಿಕಾರಕ್ಕೆ ಆಸೆಪಟ್ಟು ಕೊನೆಯಲ್ಲಿ ಜಗದೇವ, ಮಲ್ಲಬೊಮ್ಮನಿಂದ ಕೊಲೆಯಾಗುತ್ತಾನೆ. 'ಸಂಕ್ರಾಂತಿ' ನಾಟಕದಲ್ಲಿ ಬಸವಣ್ಣನ ಪ್ರಜಾಪ್ರಭುತ್ವ ಸೋಲುತ್ತದೆ. 'ಮಹಾಚೈತ್ರ'ದಲ್ಲಿ ರಾಜಪ್ರಭುತ್ವವೇ ಗೆಲ್ಲುತ್ತದೆ.

ಅಧ್ಯಾಯ-೪ರಲ್ಲಿ ವಿವಿಧ ನಾಟಕಗಳಲ್ಲಿ ಬಸವಣ್ಣ ಮತ್ತು ಆತನ ತತ್ವಗಳು ಕಾಣಿಸಿಕೊಂಡ ಬಗೆ ಎಂಬ ಅಧ್ಯಾಯದಲ್ಲಿ ನನ್ನ ಅಧ್ಯಯನಕ್ಕೆ ಒಳಪಡಿಸಿದ ನಾಟಕಕಾರರನ್ನು ಒಳಗೊಂಡಂತೆ ಮತ್ತು ಇತರ ನಾಟಕಕಾರರ ನಾಟಕಗಳನ್ನು ಅಧ್ಯಯನಕ್ಕೆ ತೆಗೆದುಕೊಂಡಿದ್ದೇನೆ. ಅ.ನ.ಕೃರವರ 'ಜಗಜ್ಯೋತಿ ಬಸವೇಶ್ವರ' ನಾಟಕ, ಎಂ.ಎಂ.ಕಲ್ಬುರ್ಗಿಯವರ 'ಕೆಟ್ಟಿತು ಕಲ್ಯಾಣ' ಎಂ.ಸಿ.ರಾಮಲಿಂಗಯ್ಯನವರು ರಚಿಸಿದ 'ಕ್ರಾಂತಿಯೋಗಿ ಬಸವಣ್ಣ' ನಾಟಕ, ಡಾ.ಸಿದ್ಧಯ್ಯ ಪುರಾಣಿಕರು ಬರೆದ 'ಆತ್ಮಾರ್ಪಣ' ಎಂಬ ನಾಟಕ, ಏಣಗಿ ಬಾಳಪ್ಪ ಸಂಯೋಜಿತ 'ಜಗಜ್ಯೋತಿ ಬಸವೇಶ್ವರ' ನಾಟಕ, ಜಿ.ಎಚ್.ಹನ್ನೆರಡುಮಠ ಬರೆದ 'ಮಹಾಸಂಗಮ' ನಾಟ, ಶ್ರೀ ಶಿವಲಿಂಗಶಾಸ್ತ್ರಿ ಹಿರೇಮಠರವರು ಬರೆದ ಕಿರುನಾಟಕ 'ಇವನಾರವ' ಈ ನಾಟಕಗಳಲ್ಲಿ ಬಸವಣ್ಣನನ್ನು ಯಾವ ರೀತಿಯಾಗಿ ನಾಟಕಕಾರರು ನೋಡಿದ್ದಾರೆ ಮತ್ತು ಅವರ ತತ್ವಗಳನ್ನು ಹೇಗೆ ಗ್ರಹಿಸಿದ್ದಾರೆ. ಎಂಬುದನ್ನು ತಿಳಿದುಕೊಳ್ಳುವ ಪ್ರಯತ್ನ ಮಾಡಿದ್ದೇನೆ. ಅಲ್ಲದೇ ಅವರು ಬಸವಣ್ಣನವರನ್ನು ನೋಡಿರುವ ದೃಷ್ಟಿಕೋನಗಳು ಎಂತವುಗಳು ಎಂಬುದನ್ನು ತಿಳಿಯಲು ಪ್ರಯತ್ನ ಈ ಅಧ್ಯಯನದಲ್ಲಿ ಮಾಡಿದ್ದೇನೆ.

ಅಧ್ಯಾಯ-೫ರಲ್ಲಿ ಬಸವಣ್ಣನ ಕುರಿತು ಬಂದಿರುವ ಆಧುನಿಕ ನಾಟಕಗಳ ವೈಶಿಷ್ಟತೆ ಮತ್ತು ಆಶಯ ಎಂಬ ಈ ಅಧ್ಯಾಯದಲ್ಲಿ ನಾನು ತೆಗೆದುಕೊಂಡ ಆಧುನಿಕ ನಾಟಕಗಳಲ್ಲಿ ಕಂಡು ಬರುವ ವಿಶಿಷ್ಟತೆಗಳನ್ನು ಗುರುತು ಮಾಡುವ ಕೆಲಸ ಮಾಡಿದ್ದೇನೆ. ಅಂದರೆ ಒಂದು ನಾಟಕದ ಆಶಯಕ್ಕೂ, ಮತ್ತೊಂದು ನಾಟಕದ ಆಶಯಕ್ಕೂ ಭಿನ್ನತೆ ಇರುವುದನ್ನು ಕಾಣುತ್ತೇವೆ. ಈ ಅಧ್ಯಾಯದಲ್ಲಿ ನಾಟಕಕಾರರ ದೃಷ್ಟಿಕೋನವನ್ನು ಆಧರಿಸಿ ಅವರ ಆಶಯವನ್ನು ನೋಡಿದ್ದೇನೆ. ಅಲ್ಲದೇ ಆ ನಾಟಕ ಹೊಂದಿರುವ ಆಶಯವನ್ನು ಗುರುತಿಸಿದ್ದೇನೆ.

ಅಧ್ಯಾಯ-೬ರಲ್ಲಿ ನನ್ನ ಅಧ್ಯಯನದಿಂದ ಆದ ಫಲಿತಗಳನ್ನು ಈ ಅಧ್ಯಾಯದಲ್ಲಿ ನೋಡಿದ್ದೇನೆ. ಅಧ್ಯಾಯ-೭ರಲ್ಲಿ ಪರಾಮರ್ಶನ ಗ್ರಂಥಗಳನ್ನು ನೋಡಿದ್ದೇನೆ. ನನ್ನ ಅಧ್ಯಯನಕ್ಕೆ ಬೇಕಾದ ಪುಸ್ತಕಗಳನ್ನು ನೋಡಿದ ಮೇಲೆ ಅವುಗಳ ಹೆಸರುಗಳನ್ನು, ಪ್ರಕಾಶಕರು, ಮುದ್ರಣ ವರ್ಷಗಳನ್ನು ನಮೂದಿಸುವುದು ಕಡ್ಡಾಯವಾಗಿರುವುದರಿಂದ ಈ ಅಧ್ಯಾಯದಲ್ಲಿ ಪರಾಮರ್ಶನ ಗ್ರಂಥಗಳನ್ನು ಹಾಕುವ ಕೆಲಸ ಮಾಡಿದ್ದೇನೆ.

## ಅಧ್ಯಾಯ–೭

## ಪರಾಮರ್ಶನ ಗ್ರಂಥಗಳು


೦೧. ಅಮರೇಶ್ ನುಗಡೋಣಿ(ಸಂ)., **ಬಸವಣ್ಣನ ವಚನಗಳು : ಸಾಂಸ್ಕೃತಿಕ ಮುಖಾಮುಖಿ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

೦೨. ಏಣಗಿ ಬಾಳಪ್ಪ(ಸಂಯೋಜಕರು)., **ಜಗಜ್ಯೋತಿ ಬಸವೇಶ್ವರ(ರಂಗನಾಟಕ)**, ಶ್ರೀ ಬಸವೇಶ್ವರ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೫೬

೦೩. ಕರೀಗೌಡ ಬೀಚನಹಳ್ಳಿ., **ಬಸವಣ್ಣ : ಪುನರ್ಲೇಖ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೫

೦೪. ಕಲಬುರ್ಗಿ.ಎಂ.ಎಂ., **ಕೆಟ್ಟಿತು ಕಲ್ಯಾಣ**, ಸಹೃದಯ ಸಾಂಸ್ಕೃತಿಕ ಅಕಾಡೆಮಿ, ಧಾರವಾಡ, ೧೯೯೫

೦೫. ಕೃಷ್ಣಮೂರ್ತಿ ಚಂದರ್(ಸಂ)., **ಗಿರೀಶ್ ಕಾರ್ನಾಡ ನಾಟಕಗಳು**, ಸಪ್ನಬುಕ್‌ಹೌಸ್, ಬೆಂಗಳೂರು, ೨೦೦೨

೦೬. ಕೃಷ್ಣರಾಯ.ಅ.ನ., **ಜಗಜ್ಯೋತಿ ಬಸವೇಶ್ವರ**, ಉಷಾ ಸಾಹಿತ್ಯ ಮಾಲೆ, ಬೆಂಗಳೂರು, ೧೯೪೯

೦೭. ಗಿರೀಶ್ ಕಾರ್ನಾಡ್., **ತಲೆದಂಡ**, ಮನೋಹರ ಗ್ರಂಥಮಾಲೆ, ಧಾರವಾಡ, ೧೯೯೦

೦೮. ಚಂದ್ರಶೇಖರ ಕಂಬಾರ, **ಶಿವರಾತ್ರಿ** ಅಂಕಿತ ಪುಸ್ತಕ, ಬಸವನ ಗುಡಿ, ಬೆಂಗಳೂರು, ೨೦೧೧

೦೯. ಚಿದಾನಂದಮೂರ್ತಿ.ಎಂ., **ವಚನ ಸಾಹಿತ್ಯ**, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೭೬

೧೦. ಪುಟ್ಟಯ್ಯ.ಬಿ.ಎಂ., **ಮುಖಾಮುಖಿ ಸಮಾಜ ಸಂಸ್ಕೃತಿ ಚಳುವಳಿ**, ಸಿದ್ಧಾರ್ಥ ಪ್ರಕಾಶನ, ಬೆಂಗಳೂರು, ೨೦೦೮

೧೧. ಪ್ರಜಾವಾಣಿ ದಿನಪತ್ರಿಕೆ., **ಹೊಸಗಾಲದ ತಲ್ಲಣಗಳಿಗೆ ಕಂಬಾರರ ಕನ್ನಡಿ**, ೨೦೧೧

೧೨. ಬಸವರಾಜ.ಎಲ್(ಸಂ)., **ಬಸವ ವಚನಾಮೃತ**, ಬಸವ ಸಮಿತಿ, ಬೆಂಗಳೂರು, ೧೯೯೯

೧೩. ಬಸವರಾಜ ಸಬರದ., **ಬಸವಣ್ಣ ಮತ್ತು ಪ್ರಸ್ತುತ ಸಾಮಾಜಿಕ ಸಂದರ್ಭ**, ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ, ೧೯೯೧

೧೪. ಬಸವರಾಜ., **ಆಧುನಿಕ ಪಠ್ಯಗಳಲ್ಲಿ ಬಸವಣ್ಣನವರನ್ನು ಕುರಿತು ಗ್ರಹಿಕೆಗಳು**, ಗೌತಮ ಬುಕ್ ಹೌಸ್, ಕಮಲಾಪುರ, ೨೦೧೫

೧೫. ಬಸವೇಶ್ವರ ಪೀಠ(ಸಂ)., **ಬಸವಣ್ಣನವರ ಪ್ರಮುಖ ಚಿಂತನೆಗಳು**, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೨೦೦೩

೧೬. ಭಗವತಿ.ಎಚ್.ಎಸ್.ಮೇಲಿನಮುನಿ., **ಹೊಸಗನ್ನಡ ಸಾಹಿತ್ಯಾವಲೋಕನ**, ವಿದ್ಯಾನಿಧಿ ಪ್ರಕಾಶನ, ಗದಗ, ೨೦೦೨

೧೭. ಭೂಸನೂರಮಠ.ಆರ್.ಸಿ., **ಬಸವ ಮತ್ತು ವಿಚಾರವಾದ ಬಸವ ಸಮಿತಿ**, ಶ್ರೀ ಬಸವೇಶ್ವರ ವೃತ್ತ, ಬೆಂಗಳೂರು, ೧೯೯೧

೧೮. ಮರುಳಸಿದ್ಧಪ್ಪ.ಕೆ., **ಆಧುನಿಕ ಕನ್ನಡ ನಾಟಕ**, ಅಂಕಿತ ಪುಸ್ತಕ ಪ್ರಕಾಶನ, ಬಸವನ ಗುಡಿ, ಬೆಂಗಳೂರು, ೧೯೮೩

೧೯. ಮಹೇಶ್ ತಿಪ್ಪಶೆಟ್ಟಿ(ಸಂ)., **ಬಸವ ತತ್ವ : ಸಾಮಾಜಿಕ ಬದಲಾವಣೆ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩

೨೦. ರಾಮಲಿಂಗಯ್ಯ.ಎಂ.ಸಿ., **ಕ್ರಾಂತಿಯೋಗಿ ಬಸವಣ್ಣ**, ಗೀತಾ ಪ್ರಕಾಶನ, ಮಾರನಗೆರೆ, ೧೯೯೨

೨೧. ರೇವಣ್ಣ.ಕೆ.ಎಂ., **ಶರಣೆ ಅಕ್ಕನಾಗಮ್ಮ**, ಅಕ್ಕನಾಗಮ್ಮ ಪ್ರಕಾಶನ, ತರೀಕೆರೆ, ೧೯೯೩

೨೨. ಲಂಕೇಶ.ಪಿ., **ಸಂಕ್ರಾಂತಿ**, ಪತ್ರಿಕೆ ಪ್ರಕಾಶನ, ಬೆಂಗಳೂರು, ೧೯೭೩

೨೩. ಲಂಕೇಶ.ಪಿ., **ಸಾಹಿತಿ ಸಾಹಿತ್ಯ ವಿಮರ್ಶೆ**, ಲಂಕೇಶ ಪ್ರಕಾಶನ, ಬೆಂಗಳೂರು, ೨೦೦೮

೨೪. ವಿಜಯಕುಮಾರ., **ಕನ್ನಡ ಸಾಹಿತ್ಯದಲ್ಲಿ ಬಸವಣ್ಣನವರ ವ್ಯಕ್ತಿತ್ವ**, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೮೧

೨೫. ವೆಂಕಟೇಶಮೂರ್ತಿ.ಟಿ., **ಕನ್ನಡ ನಾಟಕ ಯಜಮಾನ್ಯ ಸಂಕಥನ**, ಅಧ್ಯಯನ ಮಂಡಲ, ಬಸವನ ಗುಡಿ, ಬೆಂಗಳೂರು, ೨೦೦೯

೨೬. ಶಿವಪ್ರಕಾಶ್.ಎಚ್.ಎಸ್., **ಮಹಾಚೈತ್ರ**, ಸ್ನೇಹ ಪ್ರಿಂಟರ್ಸ್, ಬೆಂಗಳೂರು, ೧೯೮೯

೨೭. ಶಾಮರಾಯ.ತ.ಸು., **ಕನ್ನಡ ನಾಟಕ**, ಗೀತಾ ಬುಕ್ ಹೌಸ್, ಬೆಂಗಳೂರು, ೧೯೯೨

೨೮. ಶ್ರೀಕಂಠಶಾಸ್ತ್ರೀ ನಲವಡಿ., **ಜಗಜ್ಯೋತಿ ಬಸವೇಶ್ವರ**, ಮಲ್ಲಪ್ಪ ವಿರೂಪಾಕ್ಷಪ್ಪ ಅರಳಿ ಪುಸ್ತಕ ವ್ಯಾಪಾರಿಗಳು, ಗದಗ, ೧೯೮೩

೨೯. ಶೇಷಗಿರಿರಾವ್.ಎಲ್.ಎಸ್., **ಹೊಸಗನ್ನಡ ಸಾಹಿತ್ಯ** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೩

೩೦. ಶ್ರೀನಿವಾಸಮೂರ್ತಿ.ಎಂಆರ್., **ಭಕ್ತಿಭಂಡಾರಿ ಬಸವಣ್ಣನವರು**, ಸೆಂಟ್ರಲ್ ಕಾಲೇಜು, ಬೆಂಗಳೂರು, ೧೯೩೧

೩೧. **ಸಾಧನೆ ತ್ರೈಮಾಸಿಕ ಪತ್ರಿಕೆ**, ಪ್ರಸಾರಾಂಗ ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೨೦೧೩

೩೨. ಸಿದ್ದಯ್ಯ ಪುರಾಣಿಕ., **ಸಮಗ್ರ ನಾಟಕಗಳು**, ಶ್ರೀಗಿರಿ ಪ್ರಕಾಶನ, ಬೆಂಗಳೂರು, ೨೦೧೦

೩೩. ಸಿದ್ರಾಮ ಕಾರಣಿಕ., **ಕಲ್ಯಾಣಕ್ಕೆ ಅಲ್ಲ ಈ ದಾರಿ**, ಮಾತಾ ಪ್ರಿಂಟರ್ಸ್, ಮೈಸೂರು, ೨೦೦೯.

೩೪. ಹನ್ನೆರಡುಮಠ.ಜಿ.ಎಚ್., **ಮಹಾಸಂಗಮ**, ಹನ್ನೆರಡುಮಠ ಪ್ರಕಾಶನ, ಬಸವ ನಗರ, ಇಲಕಲ್ಲ, ೧೯೯೮

೩೫. ಹಳ್ಳಿಕೇರಿ.ಎಫ್.ಟಿ, ರವೀಂದ್ರನಾಥ(ಸಂ)., **ದಶಕದ ಕನ್ನಡ ಸಾಹಿತ್ಯ** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ., ೨೦೦೨

